# ಹೆಚ್.ಎ. ವೀರನಾಯಕ 'ಹರತಿ' : ಬದುಕು - ಬರಹ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಚರಿತ್ರೆ ವಿಭಾಗಕ್ಕೆ
ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕ
ಡಿ. ರಾಮಕೃಷ್ಣ

ಮಾರ್ಗದರ್ಶಕರು
ಪ್ರೊ. ಲಕ್ಷ್ಮಣ್ ತೆಲಗಾವಿ



ಚರಿತ್ರೆ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

ಏಪ್ರಿಲ್ ೨೦೦೫

# ಹೆಚ್.ವಿ.ವೀರನಾಯಕ 'ಹರತಿ' : ಬದುಕು - ಬರಹ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಚರಿತ್ರೆ ವಿಭಾಗಕ್ಕೆ
ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

**ಸಂಶೋಧಕ**
**ಡಿ.ರಾಮಕೃಷ್ಣ**

ಮಾರ್ಗದರ್ಶಕರು
**ಪ್ರೊ.ಲಕ್ಷ್ಮಣ್ ತೆಲಗಾವಿ**




ಚರಿತ್ರೆ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

ಏಪ್ರಿಲ್ ೨೦೦೫

101 A

# ಪ್ರಮಾಣಪತ್ರ

**ಹೆಚ್.ವಿ.ವೀರನಾಯಕ 'ಹರತಿ' : ಬದುಕು-ಬರಹ** ಎಂಬ ನಿಬಂಧವನ್ನು ಪ್ರೊ.ಲಕ್ಷ್ಮಣ್ ತೆಲಗಾವಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಸಮಾಜವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಡಿ.ರಾಮಕೃಷ್ಣ**
ಎಂ.ಫಿಲ್.ವಿದ್ಯಾರ್ಥಿ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : ೧೦.೫.೦೫

## ಮಾರ್ಗದರ್ಶಕರ ಪ್ರಮಾಣಪತ್ರ

**ಹೆಚ್.ವಿ.ವೀರನಾಯಕ 'ಹರತಿ'** : ಬದುಕು-ಬರಹ ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಡಿ.ರಾಮಕೃಷ್ಣ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಪ್ರೊ.ಲಕ್ಷ್ಮಣ್ ತೆಲಗಾವಿ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ

ದಿನಾಂಕ : 10.08.07

# ಪರಿವಿಡಿ



ಹೆಚ್.ವಿ.ವೀರನಾಯಕ 'ಹರತಿ'

(೧೯೧೮-೧೯೮೩)

## ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

ಒಬ್ಬ ವ್ಯಕ್ತಿಯ ಪ್ರಭಾವವನ್ನು ಗುರುತಿಸುವ ಪ್ರಮುಖ ಅಂಶಗಳೆಂದರೆ, ಆ ವ್ಯಕ್ತಿ ಸವೆಸಿದ ಬದುಕಿನ ವಿಶಿಷ್ಟ ಹಾದಿ ಹಾಗೂ ಅಸಾಧಾರಣ ಸಾಧನೆಗಳು. ಅನೇಕ ಕ್ಷೇತ್ರಗಳಲ್ಲಿ ಆತನ ಛಾಪು ವಿಸ್ತರಿಸಲ್ಪಟ್ಟಿರುತ್ತದೆ. ವಿವಿಧ ವರ್ಗಗಳ, ಕ್ಷೇತ್ರಗಳ ಜನರು ಆತನಿಂದ ಉಪಕೃತರಾಗಿರುತ್ತಾರೆ; ಬೆಳಕಿನ ಹಾದಿಯನ್ನು ಕಂಡುಕೊಂಡಿರುತ್ತಾರೆ. ಈ ಬಗೆಯ ವಿಶಿಷ್ಟ ವ್ಯಕ್ತಿಗಳಲ್ಲಿ ಹರ್ತಿಕೋಟೆಯ ಹೆಚ್.ವಿ.ವೀರನಾಯಕ 'ಹರತಿ' ಅವರೂ ಒಬ್ಬರೆಂಬುದನ್ನು ಈ ಅಧ್ಯಯನದಲ್ಲಿ ದೃಢೀಕರಿಸಲು ಪ್ರಯತ್ನಿಸಲಾಗಿದೆ; ಅವರ ಮೂಲವ್ಯಕ್ತಿತ್ವವನ್ನು ಅಧಿಕೃತವಾಗಿ ಚಿತ್ರಿಸಿಕೊಡಲು ಶ್ರಮಿಸಲಾಗಿದೆ. ಇತಿಹಾಸದಲ್ಲಿ, ಅದರಲ್ಲಿಯೂ ಸ್ಥಳೀಯಚರಿತ್ರೆಯ ಅಧ್ಯಯನದಲ್ಲಿ ತೊಡಗಿಕೊಂಡಿದ್ದ ವೀರನಾಯಕರು, ವಿದ್ವತ್ತಿನ ಕಾರ್ಯಚಟುವಟಿಕೆಗಳಲ್ಲಿ ಸಕ್ರಿಯರಾಗಿದ್ದರು. ಬೌದ್ಧಿಕನೆಲೆಯಲ್ಲಿಯೂ ಗುರುತಿಸಿಕೊಂಡಿದ್ದ ವೀರನಾಯಕರಿಗೆ ಸಹಜವಾಗಿಯೇ ಸಾಮಾಜಿಕ ಮನ್ನಣೆ ದೊರೆಯುವಂತಾಯಿತು. ವೀರನಾಯಕರನ್ನು ಕುರಿತ ಪ್ರಸ್ತುತ ಅಧ್ಯಯನದ ಉದ್ದೇಶವಾದರೂ ಜನಪರ ಹಾಗೂ ಸಂಸ್ಕೃತಿಪರ ಕಾಳಜಿಗಳಿಂದ ಜನಪ್ರಿಯರಾದ ಹೆಚ್.ವಿ.ವೀರನಾಯಕ 'ಹರತಿ' ಅವರ ವ್ಯಕ್ತಿತ್ವವನ್ನು ಗೌರವಪೂರ್ವಕ ದಾಖಲಿಸುವುದು.

ವೀರನಾಯಕರು ಹುಟ್ಟಿ ಬೆಳೆದುದು ಹರ್ತಿಕೋಟೆಯಲ್ಲಿ. ಇದು ಚಿತ್ರದುರ್ಗ ಜಿಲ್ಲೆ, ಹಿರಿಯೂರು ತಾಲ್ಲೂಕಿನಲ್ಲಿರುವ ಗ್ರಾಮ. 'ಹರತಿ' ಎನ್ನುವುದು ನಾಯಕ ಮನೆತನಗಳಲ್ಲೊಂದು. ಇದಕ್ಕೆ ಸಂಬಂಧಿಸಿದ ವೀರನಾಯಕರು 'ಹರತಿ' ಎಂಬುದನ್ನೇ ತಮ್ಮ ಕಾವ್ಯನಾಮವಾಗಿ ಬಳಸಿಕೊಂಡುದು ವಿಶೇಷ. ಈ ನಿಬಂಧದಲ್ಲಿ ಸಂಕ್ಷಿಪ್ತವಾಗಿಯಾದರೂ ವೀರನಾಯುಕರ ವಂಶಾವಳಿಯನ್ನು ಚರ್ಚಿಸಲಾಗಿದೆ. ಹರತಿ ನಾಯಕ ಮನೆತನ ಆರಂಭಗೊಂಡುದು ತಿಪ್ಪರಾಜ ಎಂಬುವನಿಂದ. ವೀರನಾಯಕ 'ಹರತಿ'ಯವರು ಮೂಲತಃ ಪಾಳೆಯಗಾರ ಮನೆತನಕ್ಕೆ ಸೇರಿದ ವ್ಯಕ್ತಿಯಾದ್ದರಿಂದ, ಅವರು ತಮ್ಮ ಜೀವನದುದ್ದಕ್ಕೂ ಪಾಳೆಯಗಾರ ತನದ ಗತ್ತಿನೊಂದಿಗೆ ಸಮಾಜಜೀವಿಯಾಗಿ, ಅಸಾಮಾನ್ಯ ವ್ಯಕ್ತಿಯಾಗಿ ನಡೆದುಕೊಂಡ ಬಗೆಯನ್ನು ಈ ಪ್ರಬಂಧದಲ್ಲಿ ಚರ್ಚಿಸಲಾಗಿದೆ. ಸರ್ಕಾರಿ ಹುದ್ದೆಯೊಂದರಲ್ಲಿದ್ದ ವೀರನಾಯಕರು, ಕ್ರಮೇಣ ಅದರ ಬಗೆಗಿನ ವ್ಯಾಮೋಹ ಕಳೆದುಕೊಂಡರು. ಅದೇ ವೇಳೆಗೆ ಸ್ವಾತಂತ್ರ್ಯ ಸಂಗ್ರಾಮದ ಕರೆಗೆ ಓಗೊಟ್ಟರು. ಇವೆಲ್ಲಕ್ಕೂ ಮಿಗಿಲಾಗಿ, ತಮ್ಮ ಮನದಾಳದಲ್ಲಿ ಹುದುಗಿಕೊಂಡಿದ್ದ ಸ್ಥಳೀಯಚರಿತ್ರೆ, ಜಾನಪದಗಳ ಅಧ್ಯಯನ ಮುಂದುವರೆಸಲು ಹಾಗೂ ಗ್ರಾಮೀಣರೊಡನಿದ್ದು ತಮ್ಮ ಇಡೀ ಬದುಕನ್ನು ಕೃಷಿಕರಾಗಿ ಕಳೆಯಲು ತಮ್ಮ ಹುದ್ದೆಗೆ ಶರಣು ಹೊಡೆದರು.

ಎಲೆಮರೆಯ ಕಾಯಿಯಂತಿದ್ದವರು ವೀರನಾಯಕರು. ತಮ್ಮೊಳಗಣ ಸ್ವಪ್ರತಿಭೆಯಿಂದ ಇತಿಹಾಸ ರಚನೆಗೆ ಕೈಹಾಕಿ ತಮ್ಮನ್ನು ಗುರುತಿಸಿಕೊಂಡರು. ಆದರೂ ವೀರನಾಯಕರು ಬಹುಪಾಲು ಮಂದಿಗೆ ಈವರೆಗೂ ಅಪರಿಚಿತರಾಗಿಯೇ ಇರುವುದನ್ನು ಗಮನಿಸಬಹುದು. ಇದಕ್ಕೆ ಹಲವಾರು ಕಾರಣಗಳಿರಬಹುದು. ಕೆಳಜಾತಿಯಿಂದ ಬಂದ ವೀರನಾಯಕರು ಮೂಲತಃ ಉನ್ನತ ವಿದ್ಯಾಭ್ಯಾಸ ಪಡೆದವರಲ್ಲ. ಈ ರೀತಿ ಎಲೆಮರೆಯ ಕಾಯಿಯಂತೆ ಬಾಳಿದ ಅದೆಷ್ಟೋ ಜನರನ್ನು ನಮ್ಮ ಇತಿಹಾಸವು ನಗಣ್ಯ ಮಾಡಿರುವುದುಂಟು. ಅಂಥವರನ್ನು ಮುನ್ನೆಲೆಗೆ ತರುವಲ್ಲಿ ಪ್ರಜ್ಞಾನವಂತರು ಉದಾರತೆ ತೋರಿಲ್ಲದಿರುವುದೊಂದು ವಿಪರ್ಯಾಸದ ಸಂಗತಿ.

ಈ ಕಾರಣದಿಂದ ವೀರನಾಯಕ 'ಹರತಿ'ಯಂಥ ಅದೆಷ್ಟೋ ಕ್ರಿಯಾಶೀಲ ಬರಹಗಾರರನ್ನು, ಇತಿಹಾಸ ಪ್ರೇಮಿಗಳನ್ನು ಮುನ್ನೆಲೆಗೆ ತರಬೇಕಾಗಿದೆ. ಆ ಮೂಲಕ ಅವರ ವೈಶಿಷ್ಟ್ಯವನ್ನು ಚರಿತ್ರೆ ಮತ್ತೊಮ್ಮೆ ದಾಖಲಿಸಿಕೊಳ್ಳಬೇಕಿದೆ. ಈ ದೃಷ್ಟಿಯಿಂದ ಪ್ರಸ್ತುತ ಅಧ್ಯಯನವನ್ನು ಹೆಚ್.ವಿ.ವೀರನಾಯಕ 'ಹರತಿ'ಯವರನ್ನು ಕೇಂದ್ರವಾಗಿರಿಸಿಕೊಂಡು ನಡೆಸಲಾಗಿದೆ.

ಇವರು ಗಾಂಧಿಯವರ ತತ್ವಗಳಿಂದ ಪ್ರೇರಣೆ ಪಡೆದು ಸಾಮಾಜಿಕ ಹೊಣೆಯನ್ನು ಹೊತ್ತು ಬಾಳಿದ ವ್ಯಕ್ತಿ. ಡಾ.ಬಿ.ಆರ್.ಅಂಬೇಡ್ಕರವರ ಪ್ರಭಾವವನ್ನು ವೀರನಾಯಕರಲ್ಲಿ ಗುರುತಿಸಬಹುದು. ಅಂಥವರ ಅನೇಕ ವಿಚಾರಧಾರೆಗಳು ಇವರ ಜೀವನದಲ್ಲಿ ಹಾಸುಹೊಕ್ಕಾಗಿದ್ದುದನ್ನು ಈ ನಿಬಂಧದಲ್ಲಿ ನಿರೂಪಿಸಲಾಗಿದೆ.

ವೀರನಾಯಕರು ಸರಕಾರಿ ಹುದ್ದೆಯನ್ನು ತ್ಯಜಿಸುವಲ್ಲಿಯೂ ಕೆಲವು ಕಾರಣಗಳುಂಟು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದ್ದವರಿಗೆ ವೀರನಾಯಕರು ರಹಸ್ಯವಾಗಿ ಆಹಾರವನ್ನು ಸರಬರಾಜು ಮಾಡಿದ್ದುದುಂಟು. ಸ್ವತಂತ್ರ ಪ್ರವೃತ್ತಿಯ ವೀರನಾಯಕರಿಗೆ ಸರಕಾರಿ ಅಧಿಕಾರಿಯಾಗಿರುವುದು ಸರಿಬರಲಿಲ್ಲವೆನ್ನುವುದು ವಾಸ್ತವ. ನಾಯಕರು ಸರಕಾರಿ ಹುದ್ದೆಯನ್ನು ತ್ಯಜಿಸಿದರು. ಇಂಥ ಒಬ್ಬ ರಾಷ್ಟ್ರಭಕ್ತನನ್ನು ಇಲ್ಲಿ ಪರಿಚಯಿಸಲಾಗಿದೆ.

ವೀರನಾಯಕರು ಸಾಮಾಜಿಕ ಚಿಂತಕ, ಶಿಕ್ಷಣಪ್ರೇಮಿ, ಪ್ರಗತಿಪರ ಕೃಷಿಕ, ರಾಜಕೀಯ ಮುಖಂಡ, ಹೋರಾಟಗಾರ, ಕೆಳ ಸಮುದಾಯಗಳ ಎಚ್ಚರದ ದನಿಯಾಗಿ ತಮ್ಮ ಬಹುಮುಖ ವ್ಯಕ್ತಿತ್ವವನ್ನು ಮೆರೆದಿದ್ದಾರೆ. ಅವರು ಸಮಾಜಕ್ಕೆ ಪ್ರಸ್ತುತರಾಗುವುದು ಈ ಕಾರಣಗಳಿಗಾಗಿ. ಇಂಥ ವ್ಯಕ್ತಿತ್ವದ ಪರಿಚಯ ಇಂದು ಅಗತ್ಯವಾಗಿದೆಯೆಂದು ಮನಗಂಡು ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಬಡವರ ಮೇಲೆ, ನಿರ್ಗತಿಕರ ಮೇಲೆ ನಡೆಯುತ್ತಿದ್ದ ದರ್ಪ-ದೌರ್ಜನ್ಯಗಳನ್ನು ಎದುರಿಸಿ, ಧ್ವನಿ ಇಲ್ಲದವರಿಗೆ ಧ್ವನಿಯಾಗಿ, ಅನೇಕ ದುಷ್ಟ ಪದ್ಧತಿಗಳ ನಿರ್ಮೂಲನಾ ಕಾರ್ಯ ಕೈಗೊಂಡು ದಿಟ್ಟತನ ತೋರಿದವರು ವೀರನಾಯಕರು. ಎಂಥಾ ಪರಿಸ್ಥಿತಿಯಲ್ಲೂ ಎದೆಗುಂದದೆ ತಮ್ಮ ಇಡೀ ಜೀವಿತಾವಧಿಯಲ್ಲಿ ಸಂಘರ್ಷಮಯ ಬದುಕನ್ನು ರೂಢಿಸಿಕೊಂಡಿದ್ದರು.

ಇತಿಹಾಸದಲ್ಲಿ ವಿಶಿಷ್ಟ ಪಾತ್ರವಹಿಸಿದ ನಾಯಕ ಜನಾಂಗವನ್ನು ಸೂಕ್ಷ್ಮವಾಗಿ ಅವಲೋಕಿಸುತ್ತಾ ಅಧ್ಯಯನದ ನೆಲೆಯಲ್ಲಿ ಕಾರ್ಯೋನ್ಮುಖರಾಗಿದ್ದುದು ವೀರನಾಯಕರ ವೈಶಿಷ್ಟ್ಯ. ಈ ಹಿನ್ನೆಲೆಯಲ್ಲಿ

ವೀರನಾಯಕರು ಕೈಗೊಂಡ ಜನಾಂಗಾಭಿವೃದ್ಧಿ ಕಾರ್ಯಗಳನ್ನು ಈ ನಿಬಂಧದಲ್ಲಿ ವಿಮರ್ಶಿಸಲು ಪ್ರಯತ್ನಿಸಲಾಗಿದೆ. ವೀರನಾಯಕರು ಅಸಾಮಾನ್ಯರಾದರೂ ಶ್ರೀಸಾಮಾನ್ಯರ ನಡುವೆಯೇ ತಮ್ಮ ಬದುಕನ್ನು ರೂಪಿಸಿಕೊಂಡವರು. ಜನಜೀವನದ ಮುಖ್ಯ ಪ್ರವಾಹದಿಂದ ಪ್ರತ್ಯೇಕವಾಗಿರದೆ ಕೃಷಿಕರೊಂದಿಗೆ ಬೆರೆತು ಬದುಕನ್ನು ಸಾರ್ಥಕಪಡಿಸಿಕೊಂಡವರು.

ಹರ್ತಿಕೋಟೆಯು ಐತಿಹಾಸಿಕ ಮಹತ್ವವನ್ನು ತನ್ನೊಡಲಲ್ಲಿಟ್ಟುಕೊಂಡಿರುವ ಒಂದು ಗಮನಾರ್ಹ ಸ್ಥಳ. ಇಲ್ಲಿ ಹುಟ್ಟಿದ ವೀರನಾಯಕರು ಇತಿಹಾಸಪ್ರೇಮಿಯಾಗಿ, ಜನಾಂಗದ ಅಭಿಮಾನಿಯಾಗಿ, ಸಾಂಸ್ಕೃತಿಕ ಚಟುವಟಿಕೆಗಳ ಪೋಷಕರಾಗಿ ತಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವಲ್ಲಿ ಶ್ರಮವಹಿಸಿದರು. ಅವರು ರೂಢಿಸಿಕೊಂಡ ವಿವಿಧ ಬಗೆಯ ಅಭಿರುಚಿ, ಅಭಿಪ್ರಾಯ, ಪ್ರವೃತ್ತಿ ಇತ್ಯಾದಿಗಳನ್ನು; ಹಾಗೂ ವಿವಿಧ ಕ್ಷೇತ್ರಗಳಲ್ಲಿಯ ಅವರ ಸಾಧನೆ ಮೊದಲಾದವುಗಳನ್ನು ಸಾಧ್ಯವಾದಮಟ್ಟಿಗೆ ಈ ನಿಬಂಧದಲ್ಲಿ ಚರ್ಚಿಸಲಾಗಿದೆ.

ಇತಿಹಾಸ ರಚನೆ ಮಾತ್ರವೇ ವೀರನಾಯಕರ ಪ್ರವೃತ್ತಿಯಾಗಿರದೆ, ಇತಿಹಾಸವನ್ನಾಧರಿಸಿದ ನಾಟಕಗಳನ್ನು, ಕಾದಂಬರಿಗಳನ್ನು ಬರೆಯವುದೂ ಅವರ ಹವ್ಯಾಸವಾಗಿದ್ದಿತು. ಆದರೂ ನಾಯಕ ಮನೆತನಗಳನ್ನೊಳಗೊಂಡ ಪ್ರಾದೇಶಿಕ ಚರಿತ್ರೆಯ ಬರವಣಿಗೆಯಲ್ಲಿ ಅವರು ಹೆಚ್ಚು ಆಸಕ್ತರಾಗಿದ್ದರು. ಚಿತ್ರದುರ್ಗ ಜಿಲ್ಲೆ ಹಳೆಯ ತಲೆಮಾರಿನ ಚರಿತ್ರಕಾರರಲ್ಲಿ ವೀರನಾಯಕರೂ ಪ್ರಮುಖರಾಗಿದ್ದಾರೆಂಬುದನ್ನು ಗಮನಿಸಬೇಕು.

ಇತಿಹಾಸದ ಬಗೆಗೆ ಕೇವಲ ಅಭಿಮಾನ ಆಸಕ್ತಿಗಳನ್ನಷ್ಟೇ ಬೆಳೆಸಿಕೊಂಡವರಲ್ಲ ವೀರನಾಯಕರು. ಅವರು ಮೊದಲವರ್ಗದ ಪ್ರಮುಖ ಸಂಶೋಧಕರೂ ಆಗಿದ್ದರು. ಅತ್ಯುತ್ತಮ ಸಂಶೋಧನ ಪ್ರವೃತ್ತಿಯನ್ನು ಬೆಳೆಸಿಕೊಂಡಿದ್ದ ವೀರನಾಯಕರು ತಮ್ಮ ಜೀವಿತಾವಧಿಯಲ್ಲಿ ಕೈಗೊಂಡ ಕ್ಷೇತ್ರಕಾರ್ಯದ ಮಹತ್ವ ಹೆಚ್ಚಿನದು. ಅಧ್ಯಯನ ಮತ್ತು ಕ್ಷೇತ್ರಕಾರ್ಯಗಳ ಅನುಭವದಿಂದ ಅವರು ಇತಿಹಾಸಕ್ಕೆ ಹೆಚ್ಚು ನಿಷ್ಠರಾದುದು ಹಾಗೂ ಶ್ರದ್ಧಾವಂತ ಸಂಶೋಧಕರಾದುದು ಸಹಜ. ದುರ್ಗದ ಮೊದಲ ದೊರೆ ಮತ್ತಿತಿಮ್ಮಣ್ಣನಾಯಕನನ್ನು ಕುರಿತು 'ದುರ್ಗದ ಧವಳಕೀರ್ತಿ' ಮತ್ತು 'ಬಲೆಯಲ್ಲಿ ದುರ್ಗದ ಹುಲಿ' ಹಾಗೂ ಕೊನೆಯ ಮದಕರಿನಾಯಕನನ್ನು ಕುರಿತ 'ಕಣ್ಮರೆಯಾದ ಕನ್ನಡದ ಕಲಿನಾಡು' ಇವು ವೀರನಾಯಕರು ರಚಿಸಿದ ಮುಖ್ಯವಾದ ಕಾದಂಬರಿಗಳು. ಸ್ಥಳೀಯ ಚರಿತ್ರೆಗೆ ಮತ್ತು ಸಾಹಿತ್ಯಕ್ಷೇತ್ರಕ್ಕೆ ಸಂದ ಇಂಥಾ ಕಾಣಿಕೆಗಳನ್ನು ಕುರಿತು ಅಧ್ಯಯನ ಮಾಡುವುದು ಇಂದು ಅತ್ಯಂತ ಅಗತ್ಯವಾಗಿದೆ.

ತಮ್ಮ ಅಮೂಲ್ಯ ಸಮಯವನ್ನು ಇತಿಹಾಸ ಸಂಶೋಧನೆ ಮತ್ತು ಕ್ಷೇತ್ರಕಾರ್ಯಗಳಿಗೆ ವಿನಿಯೋಗಿಸಿ ಓದಲು ಅರ್ಹವಾದ ಗ್ರಂಥಗಳನ್ನು ಪ್ರಕಟಿಸಿದ ವೀರನಾಯಕರು, ಚಿತ್ರದುರ್ಗ ಜಿಲ್ಲೆಯ ಇತಿಹಾಸ ಮತ್ತು ಸಾಹಿತ್ಯಕ್ಷೇತ್ರಗಳ ತಮ್ಮದೇ ಆದ ವಿಶಿಷ್ಟ ಸೇವೆ ಸಲ್ಲಿಸಿದ್ದಾರೆ. ಚಿತ್ರದುರ್ಗ ಇತಿಹಾಸವನ್ನು ಸಮಗ್ರವಾಗಿ ಓದಿಕೊಂಡಿದ್ದ ಹುಲ್ಲೂರು ಶ್ರೀನಿವಾಸ ಜೋಯಿಸ, ತ.ರಾ.ಸು ಮೊದಲಾದವರ ಸಮನಾಗಿ ಬೆಳೆದು ನಿಂತವರು ವೀರನಾಯಕರು. ತಮ್ಮ ಜೀವಿತದ ಕಡೆಯ ವರ್ಷಗಳಲ್ಲಿ ಚರಿತ್ರೆ ಬರವಣಿಗೆಗೆ ಹೆಚ್ಚಿನ

ಸಮಯವನ್ನು ಮೀಸಲಿಟ್ಟಿದ್ದ ವೀರನಾಯಕರು, ಸಾಂಪ್ರದಾಯಿಕ ಶೈಲಿಯ ಬರಹಗಳನ್ನು ಪ್ರಕಟಿಸಿದ ಕರ್ನಾಟಕದ ಕೆಲವು ಚರಿತ್ರಕಾರರ ವರ್ಗಕ್ಕೆ ಸೇರುತ್ತಾರೆ. ಇವರು ಬರೆದ ಕೃತಿಗಳು ಬೆರಳೆಣಿಕೆಯಷ್ಟೇ ಇದ್ದರೂ ಪ್ರಾದೇಶಿಕ ಇತಿಹಾಸದ ಕಳಚಿದ ಹಾಗೂ ಕಾಣೆಯಾದ ಕೊಂಡಿಗಳನ್ನು ಬೆಸೆಯುವಲ್ಲಿ ಹಾಗೂ ಶೋಧಿಸುವಲ್ಲಿ ಗಮನೀಯವೆನಿಸಿವೆ. ವೀರನಾಯಕರು ಇಂದು ನಮ್ಮ ಮಧ್ಯೆ ಇಲ್ಲ. ಆದರೆ ಅವರು ತಮ್ಮ ಬರಹಗಳಿಂದ, ಜನೋಪಯೋಗಿ ಕಾರ್ಯಗಳಿಂದ ಚಿರಂಜೀವಿಗಳಾಗಿರುವರು. ಇಂಥಾ ಅನೇಕ ವಿಚಾರಗಳನ್ನು ವಿವರವಾಗಿ ಚರ್ಚಿಸುವ ಉದ್ದೇಶ ಈ ನಿಬಂಧದ್ದು. ಈ ಮೂಲಕ ವೀರನಾಯಕರ ಸಾಧನೆಯ ಮಹತ್ವವನ್ನು ಮನಗಾಣಿಸಿಕೊಡಲು ಪ್ರಯತ್ನಿಸಲಾಗಿದೆ.

ವೀರನಾಯಕರು ರಚಿಸಿದ ನಾಟಕಗಳು ಪ್ರಾದೇಶಿಕ ವೀರರ, ಅರಸರ ಗುಣಾವಗುಣಗಳನ್ನು ಪ್ರತಿಬಿಂಬಿಸಿವೆ. ಇವರ ನಾಟಕಗಳಲ್ಲಿ ಸಾಹಿತ್ಯದ ವರ್ಚಸ್ಸಿದೆ; ಚಾರಿತ್ರಿಕ ಸತ್ವವಿದೆ; ರಸಾನುಭವವನ್ನುಂಟು ಮಾಡುವ ಗುಣವಿದೆ. ಪ್ರಾದೇಶಿಕ ನೆಲೆಯ ಚಾರಿತ್ರಿಕ ವಸ್ತುವನ್ನು ಉಪಯೋಗಿಸಿಕೊಂಡು ನಾಟಕಗಳನ್ನು ರೂಪಿಸಿದವರಲ್ಲಿ ವೀರನಾಯಕರೂ ಒಬ್ಬರು. ಇವರು ನಾಟಕಗಳನ್ನು ರಚಿಸುವುದರ ಜೊತೆಗೆ ರಂಗಭೂಮಿಗಾಗಿ ಅವುಗಳನ್ನು ನಿರ್ದೇಶಿಸಿಯೂ ಇದ್ದಾರೆ.

ಹರ್ತಿಕೋಟೆಯಲ್ಲಿ 'ವಾಲ್ಮೀಕಿ ಸಾಹಿತ್ಯ ಸಂಪದ' ಪ್ರಕಾಶನವನ್ನು ಸ್ಥಾಪಿಸಿ, ಹಲವಾರು ಕೃತಿಗಳನ್ನು ಓದುಗರ ಎದುರಿಗೆ ತಂದಿರುವ ವೀರನಾಯಕರು, ಪ್ರಾದೇಶಿಕ ಇತಿಹಾಸ ಕುರಿತು ಅಧ್ಯಯನ ಮಾಡುವ ಎಲ್ಲರಿಗೂ ಮಾದರಿಯಾಗಿರುವರು. ಇಷ್ಟಾದರೂ ವೀರನಾಯಕರು ಸುಪ್ರಸಿದ್ಧರೆನಿಸಿದವರಲ್ಲ. ತಮ್ಮ ಸುತ್ತಮುತ್ತಲಿನ ಸ್ಮಾರಕಗಳು ಕೂಗಿ ಹೇಳುತ್ತಿದ್ದ ಇತಿಹಾಸವನ್ನು ಶ್ರದ್ಧೆಯಿಂದ ಆಲಿಸಿ, ಸಹಜವಾಗಿಯೇ ಅದರಲ್ಲಿ ಆಸಕ್ತಿಯನ್ನು ಬೆಳಸಿಕೊಂಡು ಮೌನವಾಗಿ ಅಧ್ಯಯನಶೀಲರಾದವರು. ಓದು-ಬರಹಗಳಿಗಾಗಿ ತಮ್ಮೆಲ್ಲ ಸಮಯವನ್ನು ಮೀಸಲಾಗಿರಿಸಿದುದು ಅವರಲ್ಲಿದ್ದ ವಿದ್ವತ್‌ಪ್ರೇಮಕ್ಕೆ ಹಿಡಿದ ಕನ್ನಡಿ.

ಪ್ರಾದೇಶಿಕವಾಗಿ ಸಾಂಸ್ಕೃತಿಕ ಮಹತ್ವವನ್ನು ತಮ್ಮ ಬರಹಗಳ ಮೂಲಕ ಮನಗಾಣಿಸಿಕೊಟ್ಟ ಪ್ರಮುಖ ವ್ಯಕ್ತಿಯೆಂದರೆ ವೀರನಾಯಕರು. ಪಾಶ್ಚಾತ್ಯ ವಿದ್ವಾಂಸರು ಹೇಳುವಂತೆ 'ಭಾರತವು ಜಾನಪದದ ತವರು' ಎಂಬುದು ಪ್ರಚಾರಕ್ಕೆ ಬರಲು ವೀರನಾಯಕರಂಥವರು ಜಾನಪದ ಅಂಶಗಳನ್ನು ತಮ್ಮ ಅಧ್ಯಯನ-ಸಂಶೋಧನೆಗಳಲ್ಲಿ ಸಮರ್ಥವಾಗಿ ಬಳಸಿಕೊಂಡಂಥದೇ ಬಹುಮಟ್ಟಿಗೆ ಕಾರಣವಾಗುತ್ತದೆ.

ಶ್ರದ್ಧೆ ಮತ್ತು ನಿಷ್ಠೆಯಿಂದ ಕೆಲಸ ಮಾಡುವ ಉತ್ಸಾಹಿ ತರುಣರಿಗೆ ವೀರನಾಯಕರು ನೀಡುತ್ತಿದ್ದ ಪ್ರೋತ್ಸಾಹ ಅನುಕರಣೀಯ. ತರುಣರ ಬಗೆಗೆ ಅವರಲ್ಲಿದ್ದ ಭರವಸೆ, ನಂಬಿಕೆಗಳು ಅಪಾರ. ಆದರೆ ನಿರ್ದಿಷ್ಟ ಆಲೋಚನೆಗಳಿಲ್ಲದೆ ವೃಥಾ ಹರಟೆ ಹೊಡೆಯುತ್ತ ಕಾಲಹರಣ ಮಾಡುತ್ತಿದ್ದ ತಮ್ಮ ಗ್ರಾಮದ ಯುವಕರತ್ತಲೂ ವೀರನಾಯಕರು ಗಮನ ಹರಿಸಿದರು. ಅಂದಿನ ದಿನಗಳಲ್ಲೆ ಅವರಿಗೆ ಸ್ವಉದ್ಯೋಗ ಕಲ್ಪಿಸಿ, ಆ ಉದ್ಯೋಗದಿಂದ ಊರಿನ ಜನರಿಗೂ ಉಪಯೋಗವಾಗುವಂತೆ ನೋಡಿಕೊಂಡರು. ಒಂದು ಕಾರ್ಯದಲ್ಲಿ ಎರಡು

ಪ್ರಯೋಜನಗಳನ್ನು ಯೋಜಿಸಿ ಮಾಡಿದ ಒಬ್ಬ ಚತುರ ಗ್ರಾಮಮುಖಂಡರೆನಿಸಿದರು. ತಮ್ಮ ವ್ಯಾಪಕ ಅಧ್ಯಯನ ಮತ್ತು ಅನುಭವಗಳ ಹಿನ್ನೆಲೆಯಲ್ಲಿ ಸಮಾಜ ಪರಿವರ್ತನೆಗೆ ಬೇರು ಎನಿಸಿದ ಜ್ಞಾನವನ್ನು ತಮ್ಮ ಸ್ವಶಕ್ತಿಯಿಂದ ಹುಡುಕಿಕೊಂಡ ಓರ್ವ ಹಳ್ಳಿಗಾಡಿನ ಪ್ರಬುದ್ಧ.

ಇಂಥಾ ಬಹುಮುಖ ವ್ಯಕ್ತಿತ್ವದ ವೀರನಾಯಕ 'ಹರತಿ'ಯವರು ತಮ್ಮ ಊರನ್ನು ಒಂದು ಸಾಂಸ್ಕೃತಿಕನೆಲೆಯನ್ನಾಗಿ ಮಾಡಬೇಕೆಂಬ ಅಪೇಕ್ಷೆ ಹೊಂದಿದ್ದರು. ಚಟುವಟಿಕೆಗಳೆಲ್ಲಾ ನಗರದಲ್ಲೇ ಕೇಂದ್ರಿಕೃತವಾಗುವುದಕ್ಕೆ ಅಲ್ಲಿರುವ ಸೌಲಭ್ಯಗಳು ಕಾರಣವಿರಬಹುದು. ಹಳ್ಳಿಗಳಲ್ಲೂ ಈ ಸೌಲಭ್ಯಗಳನ್ನು ಕಲ್ಪಿಸಬೇಕೆಂಬುದು ಮಾತ್ರ ಎಲ್ಲರಿಗೂ ಹೊಳೆಯುವುದಿಲ್ಲ. ವೀರನಾಯಕರು ಆ ನಿಟ್ಟಿನಲ್ಲಿ ಯೋಚಿಸಿದ್ದರು ಮಾತ್ರವಲ್ಲ, ವ್ಯವಸ್ಥಿತವಾಗಿ ಯೋಜಿಸಿದ್ದರು. ಗಾಂಧೀಜಿ ಭಾರತದಲ್ಲಿ ಪ್ರಚುರಪಡಿಸಿದ ಖಾದಿಬಟ್ಟೆಯನ್ನೇ ಧರಿಸುತ್ತಿದ್ದ ವೀರನಾಯಕರು ಅದನ್ನು ತುಂಬಾ ಗೌರವದಿಂದ ಕಾಣುವ ಸ್ವಭಾವದವರಾಗಿದ್ದರು. ಇದರಿಂದಾಗಿ ಇತರರಲ್ಲೂ ಆ ಬಗೆಗೆ ಪ್ರೀತಿ-ಆದರಗಳು ಮೂಡುವಂತಾದವು.

ವೀರನಾಯಕರು ಚಿತ್ರದುರ್ಗ ಜಿಲ್ಲೆಯ ಹಲವಾರು ಬ್ಯಾಂಕುಗಳಲ್ಲಿ, ಸಹಕಾರ ಸಂಘ-ಸಂಸ್ಥೆಗಳಲ್ಲಿ ಡೈರೆಕ್ಟರಾಗಿಯೂ ಸೇವೆ ಸಲ್ಲಿಸಿದ್ದಾರೆ. ಹೀಗಾಗಿ ಸಹಕಾರಕ್ಷೇತ್ರದಲ್ಲಿ ಅವರಿಗೆ ಅಪಾರ ಅನುಭವವಿದ್ದಿತು. ಈ ಕಾರಣಕ್ಕಾಗಿಯೇ ಅವರು ಹಲವಾರು ಬಾರಿ ಸಹಕಾರಿಕ್ಷೇತ್ರಗಳ ಸಮ್ಮೇಳನಗಳಲ್ಲಿ ಭಾಗವಹಿಸಿದ್ದುದುಂಟು. ಅವರು ಎಷ್ಟು ಕ್ರಿಯಾಶೀಲರಾಗಿದ್ದರೆಂಬುದನ್ನು ಇದು ತಿಳಿಸುತ್ತದೆ ಮಾತ್ರವಲ್ಲ, ಸದಾ ಶ್ರಮಿಸುವ ಅವರ ಪ್ರವೃತ್ತಿ ಇಲ್ಲಿ ವ್ಯಕ್ತಪಡುತ್ತದೆ. ಈ ಎಲ್ಲ ಅನುಭವಗಳನ್ನು ಅವರು ಗ್ರಾಮೀಣ ಅಭಿವೃದ್ಧಿಗಾಗಿ ವಿನಿಯೋಗಿಸಿದರು; ಗ್ರಾಮದ ಮಾರ್ಗದರ್ಶಕರೆನಿಸಿದರು.

ವೀರನಾಯಕರು ತಮ್ಮ ಜೀವಮಾನದ ಉದ್ದಕ್ಕೂ ನಿಸ್ವಾರ್ಥ ಸೇವೆಯನ್ನು ಮಾಡಿದವರು. ಹಣ, ಅಧಿಕಾರದ ವ್ಯಾಮೋಹಕ್ಕೆ ಎಂದೂ ಒಳಗಾಗದೆ ಸಾಮಾಜಿಕ ಕಳಕಳಿಯನ್ನು ತಮ್ಮ ಮನೋಭೂಮಿಕೆಯಲ್ಲಿ ಹೂರಣವಾಗಿಟ್ಟುಕೊಂಡವರು. ಪ್ರಚಾರ, ಗೌರವಗಳಿಗೆ ಮುಖಮಾಡದ ಅಪ್ಪಟ ವ್ಯಕ್ತಿತ್ವ ವೀರನಾಯಕರದು.

## ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನಕ್ಕೆ ಉಪಯೋಗಿಸಿಕೊಳ್ಳಲಾದ ಆಕರಗಳು ಪ್ರಮುಖವಾಗಿ ಎರಡು ವಿಧದವು :

೧. ಕ್ಷೇತ್ರಕಾರ್ಯದಿಂದ ಸಂಗ್ರಹಿಸಿದ ಮಾಹಿತಿ, ಹಾಗೂ ೨. ಪ್ರಕಟಿತ ಸಾಹಿತ್ಯ, ದಾಖಲೆ ಇತ್ಯಾದಿ.

**೧. ಕ್ಷೇತ್ರಕಾರ್ಯದ ಮಾಹಿತಿ :** ಈ ಪ್ರಬಂಧಕ್ಕೆ ಬೇಕಾದ ಪ್ರಾಥಮಿಕ ಮಾಹಿತಿಯನ್ನು ವ್ಯಾಪಕ ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿಕೊಳ್ಳಲಾಗಿದೆ. ವೀರನಾಯಕರಂಥ ಚರಿತ್ರಕಾರರನ್ನು ಕುರಿತು ನಿರೂಪಿಸುವಾಗ ಪ್ರಕಟಿತ ಲೇಖನ ಸಾಮಗ್ರಿಗಿಂತ ಕ್ಷೇತ್ರಕಾರ್ಯ ಮಾಹಿತಿ ಮಹತ್ವದ್ದಾಗುತ್ತದೆ. ಜನಸಮುದಾಯದ ಮಧ್ಯೆ ಬೆಳೆದು ನಿಂತ ವೀರನಾಯಕರಂಥವರ ಬಗೆಗೆ ಸ್ಥಳೀಯರು, ಜನಪದರು ಅರ್ಥೈಸುವ ಹಾಗೂ ಚಿತ್ರಿಸುವ ಪರಿ ವೈವಿಧ್ಯಮಯವಾಗಿರುತ್ತದೆ. ಚಿತ್ರದುರ್ಗ ಮತ್ತು ಹರ್ತಿಕೋಟೆಗಳು ಮೊದಲ್ಗೊಂಡು ಹಿರಿಯೂರು,

ವದ್ದಿಕೆರೆ, ಚಳ್ಳಕೆರೆ ಮುಂತಾದ ವೀರನಾಯಕರಿಗೆ ಸಂಬಂಧಿಸಿದ ಊರುಗಳಿಗೆ ಭೇಟಿ ನೀಡಿ ಕೆಲವು ವ್ಯಕ್ತಿಗಳಿಂದ ಮಾಹಿತಿ ಪಡೆಯಲಾಗಿದೆ. ಕ್ಷೇತ್ರಕಾರ್ಯದ ವಿಧಿ-ವಿಧಾನಗಳನ್ನು ಅನುಸರಿಸಿ ಮಾಹಿತಿ ಸಂಗ್ರಹಿಸಲಾಗಿದೆ. ಸಂದರ್ಶನ, ಪ್ರಶ್ನಾವಳಿ ಮತ್ತು ಅವಲೋಕನ ವಿಧಾನಗಳನ್ನು ಬಳಸಿ ಕ್ಷೇತ್ರಕಾರ್ಯವನ್ನು ಮಾಡಲಾಗಿದೆ.

**೨. ಪ್ರಕಟಿತ ಸಾಹಿತ್ಯ, ದಾಖಲೆ ಇತ್ಯಾದಿ :** ವೀರನಾಯಕರ ಬದುಕು-ಬರಹಕ್ಕೆ ಸಂಬಂಧಪಟ್ಟಂತೆ ವಿವಿಧ ಆಕರಗಳಿಂದ ಸಂಗ್ರಹಿಸಿದ ಮಾಹಿತಿಯನ್ನು ಬಳಸಿಕೊಳ್ಳಲಾಗಿದೆ. ಪ್ರಕಟಿತ ಆಕರಗಳಿಂದ ವೀರನಾಯಕರ ಕುರಿತಾದ ಸಾಕಷ್ಟು ಮಾಹಿತಿ ಲಭ್ಯವಾಗಿದ್ದು, ಪ್ರಸ್ತುತ ಪ್ರಬಂಧ ರಚನೆಯಲ್ಲಿ ಇದನ್ನು ಸಂದರ್ಭಾನುಸಾರ ಬಳಸಿಕೊಳ್ಳಲಾಗಿದೆ. ಪ್ರಕಟಿತ ಆಕರವನ್ನು ಈ ಕೆಳಗಿನಂತೆ ವಿಭಾಗಿಸಬಹುದು :

೧. ಪ್ರಕಟಿತ ಸಾಹಿತ್ಯಕೃತಿಗಳು

೨. ದಾಖಲೆಗಳು

೩. ಅಭಿನಂದನಾ ಗ್ರಂಥ

೪. ಪತ್ರಿಕೆಗಳು ಹಾಗೂ ಛಾಯಾಚಿತ್ರಗಳು.

ಇವುಗಳ ಪ್ರಯೋಜನವನ್ನು ಈ ನಿಬಂಧದ ಸಿದ್ಧತೆಯಲ್ಲಿ ಬಳಸಿಕೊಳ್ಳಲಾಗಿದೆ. ಹರ್ತಿಕೋಟೆಯ ಅಥವಾ ಚಿತ್ರದುರ್ಗದ ಸಿರಿಯನ್ನು ಮಾತ್ರವಲ್ಲದೆ ಕನ್ನಡ ನಾಡು-ನುಡಿಯ ಸಿರಿಯನ್ನು ಹೆಚ್ಚಿಸಿರುವ 'ಹರತಿಸಿರಿ' ನೆನಪಿನ ಸಂಪುಟವು, ವೀರನಾಯಕರ ಜೀವನ-ಸಾಧನೆಯನ್ನು ದಾಖಲಿಸುವುದರೊಡನೆ ಪ್ರಾದೇಶಿಕ ಇತಿಹಾಸದ ಬಗೆಗೆ ಆಸಕ್ತರಾದ ಪ್ರತಿಯೊಬ್ಬ ಸಂಶೋಧಕರಿಗೂ ಮಾರ್ಗದರ್ಶನ ನೀಡುತ್ತದೆ.

ಪ್ರಸ್ತುತ ನಿಬಂಧದಲ್ಲಿ ಆರು ಅಧ್ಯಾಯಗಳಿವೆ. ಪ್ರತಿಯೊಂದು ಅಧ್ಯಾಯವು ಹೆಚ್ಚಾಗಿ ಕ್ಷೇತ್ರಕಾರ್ಯದ ಮಾಹಿತಿಯನ್ನು ಒಳಗೊಂಡಿರುವುದುಂಟು. ಅಗತ್ಯವಿದ್ದಲ್ಲಿ ಅಂಥಾ ಮಾಹಿತಿಯನ್ನು ವಿಶ್ಲೇಷಣೆಗೊಳಪಡಿಸಲಾಗಿದೆ. ಆದಷ್ಟುಮಟ್ಟಿಗೆ ಎಲ್ಲ ಅಧ್ಯಾಯಗಳನ್ನು ಸಮಗ್ರವಾದ ರೀತಿಯಲ್ಲಿ ಸಿದ್ಧಪಡಿಸಲು ಪ್ರಯತ್ನಿಸಲಾಗಿದೆ. ವೀರನಾಯಕರಿಗೆ ಸಂಬಂಧಪಟ್ಟ ಸಂಘ-ಸಂಸ್ಥೆಗಳು ಹಾಗೂ ಸಾರ್ವಜನಿಕ ಇಲಾಖೆಗಳ ಸಹಾಯ ಪಡೆದುಕೊಳ್ಳಲಾಗಿದ್ದು, ಸಂಗ್ರಹಿಸಲಾದ ಅಂಕಿ-ಅಂಶಗಳನ್ನು ಸೂಕ್ತ ಕಂಡಂತೆ ಬಳಸಿಕೊಂಡಿರುವುದುಂಟು. ಪ್ರಸ್ತುತ ನಿಬಂಧವು ವೀರನಾಯಕ 'ಹರತಿ'ಯಂಥವರನ್ನು ಅಧ್ಯಯನಿಸುವ ನಿಟ್ಟಿನಲ್ಲಿ ಸಹಕಾರಿಯಾಗಬಲ್ಲುದೆಂದು ಭಾವಿಸಬಹುದು.

❑❑

## ೨

# ವೀರನಾಯಕರ ಬದುಕಿನ ಹಿನ್ನೆಲೆ

ಹೆಚ್.ವಿ.ವೀರನಾಯಕ 'ಹರತಿ'ಯವರು ಜನಿಸಿದ ಹರ್ತಿಕೋಟೆಯು ಇತಿಹಾಸ ಪ್ರಸಿದ್ಧ ಸ್ಥಳ. ಚಿತ್ರದುರ್ಗ ಜಿಲ್ಲೆಯ ನಾಯಕ ಸಂಸ್ಥಾನಗಳ ಪೈಕಿ ಇದಕ್ಕೂ ಮಹತ್ವದ ಸ್ಥಾನವಿದೆ. ಈ ಎಡೆಯ ಚಾರಿತ್ರಿಕ ಹಿನ್ನೆಲೆಯನ್ನು ಇಲ್ಲಿ ಸ್ಥೂಲವಾಗಿಯಾದರೂ ಗಮನಿಸಬಹುದು. ಮಧ್ಯಕಾಲೀನ ನಾಯಕ ಮನೆತನಗಳಲ್ಲೊಂದು 'ಹರತಿ' ಮನೆತನ. ಈ ಮನೆತನದ ದಾಖಲೆಗಳು ತುಂಬಾ ಗೊಂದಲಮಯವಾಗಿವೆ. ನಮಗೆ ದೊರೆತ ಆಧಾರಗಳ ಪ್ರಕಾರ, ತಿಪ್ಪರಾಜ ಅಥವಾ ತಿಪ್ಪರಾಜನಾಯಕ ಎಂಬುವವನು 'ಹರತಿ' ಮನೆತನದ ಮೂಲಪುರುಷ. ತಿಪ್ಪರಾಜನ ಜನನದ ಬಗ್ಗೆ ಅನೇಕ ಕಟ್ಟುಕಥೆಗಳಿವೆ. ಅವು ಹೆಚ್ಚು-ಕಡಿಮೆ ಮಹಾಭಾರತ ಕಥೆಯಲ್ಲಿ ಬರುವಂಥ ಕರ್ಣನ ಜನನ ವೃತ್ತಾಂತವನ್ನು ಅನುಕರುಣೆ ಮಾಡಿದಂತೆ ತೋರುತ್ತದೆ. ತಿಪ್ಪರಾಜನಾಯಕನ ಕುರಿತಾದ ಕಥೆಗಳು ಸತ್ಯಾಂಶಗಳಿಂದ ದೂರವಿದ್ದರೂ ತಿಪ್ಪರಾಜನಾಯಕನನ್ನು ಸೂರ್ಯವಂಶದವನು, ಎನುಮಲ ಬೆಡಗಿನವನು ಎಂದು ಪುಷ್ಠೀಕರಿಸಲು ಇವುಗಳನ್ನು ರಚಿಸಿದಂತೆ ತೋರುತ್ತದೆ.

ಈ ಕಥೆಗಳು ಹೆಚ್ಚು-ಕಡಿಮೆ ಜನಪದ ಮೂಲದಿಂದ ಬಂದಂಥವು. ಈ ಕಥೆಗಳಲ್ಲಿ ಬರುವ ಸ್ಥಳಗಳು, ಕಾಲಗಳು, ವ್ಯಕ್ತಿಗಳು, ಘಟನೆಗಳು ಒಂದೇ ತೆರನಾಗಿಲ್ಲ. ಸ್ಥಳೀಯ ಚರಿತ್ರೆಯ ನಿರೂಪಣೆಯಲ್ಲಿ ಸಾಮಾನ್ಯವಾಗಿ ಈ ರೀತಿಯ ಮೌಖಿಕ ಕಥನಗಳು ಕಂಡುಬರುವುದುಂಟು

ಹರತಿಯ ತಿಪ್ಪರಾಜನ ಕಾಲಾವಧಿ ಸು.೧೩೪೦ ರಿಂದ ೧೩೫೫. ತಿಪ್ಪರಾಜನು ವಿಜಯನಗರದ ಆರಂಭದ ಅರಸರಾದ ಹಕ್ಕ-ಬುಕ್ಕರ ಸೈನ್ಯದಲ್ಲಿ ದಳಪತಿಯಾಗಿದ್ದನು. ತಿಪ್ಪರಾಜನ ಪೂರ್ವಿಕರು ಕೃಷ್ಣಾನದಿ ತೀರದಲ್ಲಿ ಮುಸ್ಲಿಂರ ಹಾವಳಿ ಹೆಚ್ಚಾದಾಗ ವಿಜಯನಗರ-ಆನೆಗೊಂದಿಗಳ ಕಡೆ ಬಂದು ನೆಲೆಸಿದರು. ಇವರು ಮೂಲತಃ ಬಿಜಾಪುರದ ಹರತಿ-ಸಾರವಾಡಕ್ಕೆ ಸೇರಿದವರು. ಈ ಭಾಗದಲ್ಲಿ ಬಹಮನಿ ಸಾಮ್ರಾಜ್ಯ ವಿಸ್ತರಣೆಯಾಗುವವರೆಗೂ ಇವರು ದೇವಗಿರಿ ಸೇವುಣರ, ಕಲ್ಯಾಣ ಚಾಲುಕ್ಯರ ಹಾಗೂ ಕಳಚೂರಿಗಳ ಸೇನಾನಿಗಳಾಗಿದ್ದರು.

ತಿಪ್ಪರಾಜನು ಬಲಿಷ್ಠ ಸಾಮಂತಾಧಿಪತಿಯಾಗಿದ್ದನು. ಅನೇಕ ಸಾಹಸಕಾರ್ಯಗಳನ್ನು ಮಾಡಿ ಅನೇಕ ಬಿರುದುಗಳನ್ನು ಸಂಪಾದಿಸಿದ್ದನು. ಅವುಗಳಲ್ಲಿ 'ಹೊಳಕಲ್ಲಬೊಂಮನ ಶೀರತ್ಸೇದನಂ' ಎಂಬುದನ್ನು ಹರಿಹರನಿಂದ ಪಡೆದಿದ್ದರೆ, 'ಹೊಯ್ಸಣದಳ ವಿಭಾಡಂ' ಎಂಬುದನ್ನು ಬುಕ್ಕರಾಯನಿಂದ ಪಡೆದನು. ಇವೇ ಅಲ್ಲದೆ, ಈತನಿಗೆ 'ಭಾದ್ರಮಲುಕ ಸಪ್ತಾಂಗಹರಣಂ' 'ಕಠಾರೀರಾಯಂ', 'ಮೆಸನ ತಲೆಗುಂಡುಗಂಡಂ' ಮೊದಲಾದ ಬಿರುದುಗಳಿದ್ದವು. ಅಲ್ಲದೆ, ಬುಕ್ಕರಾಯನಿಂದ ತಿಪ್ಪರಾಜನಿಗೆ ವೇದಾವತಿತೀರದ ಬಹುಭಾಗ

ಜಹಗೀರಾಗಿ ಬಂದಿತು. ತಿಪ್ಪರಾಜನು ತಮ್ಮ ಪೂರ್ವಿಕರ ಸ್ಮರಣಾರ್ಥವಾಗಿ ಕೆಲವು ಗ್ರಾಮಗಳಿಗೆ ಅವರ ಹೆಸರುಗಳನ್ನಿಟ್ಟುದು ವಿಶೇಷ. ಇಂತಹ ಗ್ರಾಮಗಳ ಪೈಕಿ 'ಹರ್ತಿಕೋಟೆ'ಯೂ ಒಂದು.

ಸಂಶೋಧನೆಗಳಿಂದ ದೃಢಪಟ್ಟಿರುವಂತೆ, ತಿಪ್ಪರಾಜನಾಯಕನ ತಂದೆಯ ಹೆಸರು ಚಂದ್ರರಾಜ; ತಾಯಿಯ ಹೆಸರು ರತ್ನಮ್ಮ. ತಿಪ್ಪನಾಯಕ ತನ್ನ ತಂದೆ-ತಾಯಿಯರ ಸ್ಮರಣೆಗಾಗಿಯೂ ಮಧುಗಿರಿಯ ಪರಿಸರದಲ್ಲಿ ಕೆಲವು ಗ್ರಾಮಗಳನ್ನು ನಿರ್ಮಿಸಿದ್ದಾನೆ. ಮಧುಗಿರಿಯ ಹತ್ತಿರವಿರುವ ದೊಡ್ಡೇರಿಗ್ರಾಮವನ್ನು ಚಂದ್ರಪ್ಪನ ದೊಡ್ಡೇರಿಯೆಂದು ಕರೆಯಲಾಗುತ್ತದೆ. ಮಧುಗಿರಿ ಹೋಬಳಿಯಲ್ಲಿಯೇ 'ಚಂದ್ರಗಿರಿ' ಎಂಬ ಇನ್ನೊಂದು ಗ್ರಾಮವಿದೆ. ಸ್ವಲ್ಪ ಅಂತರದಲ್ಲಿಯೇ 'ರತ್ನಗಿರಿ' ಎಂಬ ಊರಿದೆ.

ತಿಪ್ಪರಾಜನಿಗೆ ಕಾಮಯ್ಯನಾಯಕನೆಂಬ ಮಗನಿದ್ದನು. ಈತನು ತಂದೆಯಷ್ಟು ಪ್ರಭಾವಶಾಲಿಯಾಗಿರಲಿಲ್ಲ. ಕಾಮಯ್ಯನಾಯಕನಿಗೂ ಅಬ್ಬಯ್ಯನಾಯಕ ಮತ್ತು ಕೋಟೆನಾಯಕ ಎಂಬ ಇಬ್ಬರು ಮಕ್ಕಳಿದ್ದರು. ಇದರಲ್ಲಿ ಅಬ್ಬಯ್ಯನಾಯಕ ಎಂಬುವವನು ಸ್ವಲ್ಪಮಟ್ಟಿಗೆ ಪ್ರಸಿದ್ಧನಾದವನು. ಇವನು ಎರಡನೇ ಹರಿಹರನ ಕಾಲಕ್ಕೆ ಸೇರಿದವನಾಗಿದ್ದು, ಕೋಟೆಕೆರೆ ಎಂಬಲ್ಲಿ ವಾಸವಾಗಿದ್ದನು. ಕೋಟೆನಾಯಕನಿಗೆ ಮಲ್ಲೇನಾಯಕನೆಂಬ ಮಗನಿದ್ದು, ಇವರೀರ್ವರೂ ಪರಶುರಾಮಪುರದಲ್ಲಿದ್ದರು.

ಅಬ್ಬೆನಾಯಕನಿಗೆ ಪಾಲನಾಯಕ, ಕಾಮನಾಯಕ ಹಾಗೂ ಬೊಂಮನಾಯಕ ಎಂಬ ಪುತ್ರರಿದ್ದು, ಕಾಮನಾಯಕ ಮತ್ತು ಬೊಂಮನಾಯಕರು ಐಮಂಗಲದ ಆಸುಪಾಸಿನ ಆಡಳಿತ ನೋಡಿಕೊಳ್ಳುತ್ತಿದ್ದರು. ಹಿರಿಯ ಮಗ ಪಾಲನಾಯಕನು ಕೋಟೆಕೆರೆ ಮತ್ತು ಹರ್ತಿಕೋಟೆಗಳಲ್ಲಿ ಆಳುತ್ತಿದ್ದನು. ಎರಡನೇ ಮಗನು ಹರತಿ-ಸಾರವಾಡದ ಆಸುಪಾಸಿನ ಆಡಳಿತವನ್ನೂ ನೋಡಿಕೊಳ್ಳುತ್ತಿದ್ದನು.

ಪಾಲನಾಯಕನ ಮಗ ಬೊಮ್ಮೆಯನಾಯಕ. ಈತನ ಮಗ ಎರಬಾಪೆನಾಯಕ. ಈತನ ಮಗ ಚಿಕ್ಕತಿಪ್ಪರಾಜ. ಈತನು ಪ್ರಭಾವಿ ವ್ಯಕ್ತಿಯಾಗಿದ್ದು, ಸಾಳುವವಂಶದ ನರಸಿಂಹನ ಕಾಲದವನು (೧೪೮೫-೧೪೯೧). ಇವನು ನಿಡುಗಲ್ಲುದುರ್ಗದ ಅಧಿಪತಿಯೆನಿಸಿದ. ಈತನ ಸಂತತಿಯವರು ಕ್ರಮೇಣ ಸಿರಾ ಪಾಳೆಯಪಟ್ಟನ್ನು ಸ್ಥಾಪಿಸಿದರಲ್ಲದೆ, ೧೬೩೦ರ ವೇಳೆಗೆ ರತ್ನಗಿರಿ ಮತ್ತು ಮಿಡಗೇಸಿಗಳಲ್ಲಿಯೂ ನೆಲೆಸಿದರು. ಹರ್ತಿಕೋಟೆ ಪ್ರದೇಶದಲ್ಲಿ ಬಹುಕಾಲ ನೆಲೆಸಿ ಅಲ್ಲಿಯ ಆಡಳಿತ ನೋಡಿಕೊಳ್ಳುತ್ತಿದ್ದವರು ಕೋಟೆಕೆರೆ ಅಬ್ಬೆನಾಯಕನ ಎರಡನೇ ಮಗನಾದ ಕಾಮನಾಯಕನ ಪೀಳಿಗೆಯವರು.

ಈ ಮೇಲಿನ ಯಾವುದೇ ಪೀಳಿಗೆಯವರ ಬಗೆಗೆ ಕ್ರಮಬದ್ಧ ದಾಖಲೆಗಳ ಕೊರತೆಯ ಪ್ರಯುಕ್ತ ಹರತಿ ವಂಶಜರ ಇತಿಹಾಸವು ಸ್ಪಷ್ಟವಾಗಿ ತಿಳಿದುಬರುವುದಿಲ್ಲ. ಆದರೆ ಈ ಪಾಳೆಯಗಾರರು ವಿವಿಧ ಶಾಖೆಗಳಲ್ಲಿ ಬೇರೆ ಬೇರೆಯಾಗಿ ಉಳಿದರೂ ಒಂದೇ ಕುಟುಂಬದ ಅಣ್ಣತಮ್ಮಂದಿರಂತೆ ೧೩೪೦ ರಿಂದ ೧೮೦೦ರ ವರೆಗೆ, ಅಂದರೆ ಸುಮಾರು ೪೬೦ ವರ್ಷಗಳ ಕಾಲ, ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳ ಬಹುಪಾಲು ಪ್ರದೇಶದ ಮೇಲೆ ತಮ್ಮ ಆಧಿಪತ್ಯ ಸ್ಥಾಪಿಸಿಕೊಂಡಿದ್ದರು. ವಿಜಯನಗರದರಸರು ಮತ್ತು ಅವರ ಸಾಮಂತರ

ಬಳಿ ಸೇನಾಧಿಕಾರಿಗಳಾಗಿ, ಜಹಗೀರುದಾರರಾಗಿ, ಕಾಲಕ್ರಮೇಣ ದೊರೆಗಳಾಗಿ ಉನ್ನತ ಸ್ಥಾನ-ಮಾನಗಳನ್ನು ಪಡೆದುಕೊಂಡುದು ಇವರ ವಿಶೇಷ. ಹರ್ತಿಕೋಟೆ, ಹರತಿ-ಐಮಂಗಲ, ಹರತಿ-ನಿಡುಗಲ್ಲು ಶಾಖೆಗಳಲ್ಲಿ ಈ ಹರತಿ ಮನೆತನದವರು ತಮ್ಮ ರಾಜಕೀಯ ಸಾಧನೆ ಮಾಡಿದರು. ಇವರು ಹಾಕಿಸಿದ ಶಾಸನಗಳಲ್ಲಿ ಇವರು ಧರಿಸಿಕೊಂಡಿದ್ದ ೨೫ಕ್ಕೂ ಹೆಚ್ಚು ಬಿರುದುಗಳ ಪರಿಚಯವಾಗುತ್ತದೆ. ಹರತಿ ನಾಯಕರು ನಿರ್ಮಿಸಿದ ದೇವಾಲಯ, ಕೆರೆ, ಕೊಳ ಮೊದಲಾದವು ಇಂದಿಗೂ ಹರ್ತಿಕೋಟೆಯ ಪರಿಸರದಲ್ಲಿ ಸುಸ್ಥಿತಿಯಲ್ಲಿ ಕಂಡು ಬರುತ್ತವೆ. ಕಲ್ಲೇಶ್ವರ ಅಥವಾ ಕಲ್ಲೇದೇವರ ಗುಡಿ, ವೀರಭದ್ರಸ್ವಾಮಿ ದೇವಾಲಯ, ಆಂಜನೇಯ ಮತ್ತು ವೆಂಕಟರಮಣ ಗುಡಿಗಳು ಮೊದಲಾದ ಪ್ರಾಚೀನ ಮತ್ತು ನೂತನ ದೇವಾಲಯಗಳು ಇಲ್ಲಿ ನೆಲೆಸಿವೆ. ನಾಯಕರ ಅವಧಿಯ ಕೋಟೆಯು ಇಂದು ಸಂಪೂರ್ಣ ನಾಶಗೊಂಡಿದೆ. ಊರುಮಧ್ಯದಲ್ಲಿರುವ ಆಳವಾದ ಹಾಗೂ ವಿಶಿಷ್ಟ ವಾಸ್ತುರಚನೆಯನ್ನೊಳಗೊಂಡ ಕಲ್ಲುಬಾವಿಯನ್ನು ನಿರ್ಮಿಸಿಕೊಟ್ಟವರು ರತ್ನಗಿರಿ ಪಾಳೆಯಗಾರರು. ಹರ್ತಿಕೋಟೆಯ ಪರಿಸರದಲ್ಲಿರುವ ದೊಡ್ಡಕೆರೆ ಮತ್ತು ಚಿಕ್ಕಕೆರೆಗಳು ಸಹಾ ಇವರದೇ ನಿರ್ಮಾಣಗಳು. ಇಂದಿಗೂ ಉಳಿದಿರುವ ವಿಶಿಷ್ಟ ಸ್ಮಾರಕಗಳಲ್ಲಿ ಆಂಜನೇಯ ಮತ್ತು ವೆಂಕಟರಮಣ ಗುಡಿಗಳ ಬಳಿಯಿರುವ ಕಲಾತ್ಮಕವಾದ ಉಯ್ಯಾಲೆಮಂಟಪ ಮತ್ತು ದೀಪಸ್ತಂಭಗಳು, 'ಬೀರೇದ' ಎಂಬವನ ಹೆಸರಿನಲ್ಲಿರುವ ಶಾಸನೋಕ್ತ ವೀರ-ಮಾಸ್ತಿಗಲ್ಲು, ಧರ್ಮಪ್ರಭು ವೀರಪದ್ದ(ದ್ಮ)ಣ್ಣನಾಯಕನ ಸಮಾಧಿಯ ಮೇಲಿರುವ ಸ್ತಂಭಶಿಲ್ಪ, ವಿಶಿಷ್ಟ ಕಲಾಶೈಲಿಯಲ್ಲಿ ಮೂಡಿರುವ ಹತ್ತಕ್ಕೂ ಹೆಚ್ಚು ಸಂಖ್ಯೆಯ ವೀರಗಲ್ಲು, ವೀರ-ಮಾಸ್ತಿಗಲ್ಲುಗಳು ಮುಖ್ಯವಾದುವು. ಹರ್ತಿಕೋಟೆಯ ನಾಯಕರ ಆಡಳಿತಾವಧಿಯ ಸಾಂಸ್ಕೃತಿಕ ಬದುಕಿನ ಪ್ರತೀಕಗಳಾಗಿ ಇವು ಇಂದಿಗೂ ಉಳಿದು ಬಂದಿವೆ; ಹಾಗೂ ಎಲ್ಲರನ್ನೂ ಪ್ರಭಾವಿಸುತ್ತಿವೆ.

* * *

ಹೆಚ್.ವಿ.ವೀರನಾಯಕ 'ಹರತಿ'ಯವರ ಬದುಕು ಆರಂಭಗೊಂಡುದು ಇಂಥಾ ವಿಶಿಷ್ಟ ಐತಿಹಾಸಿಕ ನೆಲೆಯಲ್ಲಿ. ಇವರು ಪಾಳೆಯಗಾರಿಕೆಯ ಗತ್ತುಗಾರಿಕೆಯಿಂದ ಕೂಡಿದ ಬೇಡ ಜನಾಂಗಕ್ಕೆ ಸೇರಿದವರು. ಇವರ ತಂದೆ ವೀರಲಕ್ಕಪ್ಪನಾಯಕರು ವೃತ್ತಿಯಿಂದ ಉಪಾಧ್ಯಾಯರಾಗಿದ್ದರು. ವೀರಲಕ್ಕಪ್ಪನವರಿಗೆ ಇಬ್ಬರು ಪತ್ನಿಯರು. ವೀರನಾಯಕರು ವೀರಲಕ್ಕಪ್ಪನಾಯಕರ ಮೊದಲನೇ ಹೆಂಡತಿಯಾದ ಪುಟ್ಟವೀರಮ್ಮನವರಲ್ಲಿ ೯ನೇ ಮೇ ೧೯೧೮ರಂದು ಹರ್ತಿಕೋಟೆಯಲ್ಲಿ ಜನಿಸಿದರು. ಆದರೆ ವೀರನಾಯಕರು ತಾವು ಹುಟ್ಟಿದ ಐದು ತಿಂಗಳಲ್ಲೇ ಹೆತ್ತತಾಯಿಯನ್ನು ಕಳೆದುಕೊಂಡು ತಬ್ಬಲಿಯಾದರು. ಇವರ ಬದುಕಿನ ಹಿನ್ನೆಲೆಯನ್ನು ಗಮನಿಸಿದಾಗ ಇವರು ತಮ್ಮ ಬಾಲ್ಯಜೀವನವನ್ನು ತುಂಬಾ ಕಷ್ಟಕರವಾದ ರೀತಿಯಲ್ಲಿ ಕಳೆದರು.

ವೀರಲಕ್ಕಪ್ಪನಾಯಕರು ಸ್ವಲ್ಪಕಾಲ ಕಳೆದ ನಂತರ ನರಸಮ್ಮ ಎಂಬ ಕನ್ಯೆಯನ್ನು ವಿವಾಹವಾದರು. ವೀರನಾಯಕರ ಚಿಕ್ಕಮ್ಮಳಾದ ನರಸಮ್ಮಳೂ ಮತ್ತು ವೀರನಾಯಕರ ಹೆತ್ತತಾಯಿ ಪುಟ್ಟವೀರಮ್ಮಳೂ ಒಡಹುಟ್ಟಿದ ಸೋದರಿಯರು. ವೀರಲಕ್ಕಪ್ಪನಾಯಕರು ತಾಯಿಯನ್ನು ಕಳೆದುಕೊಂಡ ಹಸುಳೆ ವೀರನಾಯಕರಿಗಾಗಿ ನರಸಮ್ಮಳನ್ನು ಮದುವೆಯಾದದ್ದು ಸಹಜವಾದುದಾಗಿದ್ದಿತು. ವೀರನಾಯಕರಿಗೆ ಇದ್ದ ಒಬ್ಬನೇ ತಮ್ಮ

ಹೆಚ್.ವಿ.ಪುಟ್ಟನಾಯಕರು ನರಸಮ್ಮನವರಲ್ಲಿ ಜನಿಸಿದವರು. ವೀರನಾಯಕರು ಮತ್ತು ಪುಟ್ಟನಾಯಕರು ಒಟ್ಟಾಗಿ ಕೂಡಿ, ಹಾಡಿ, ಬೆಳೆದು ಲವ-ಕುಶರಂತೆ ಅನ್ಯೋನ್ಯವಾಗಿ ಬಾಳಿದವರು. ಈ ನಡುವೆ ವೀರಲಕಪ್ಪನಾಯಕರೂ ಮರಣ ಹೊಂದಿದರು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿಯೂ ವೀರನಾಯಕರು ಹರ್ತಿಕೋಟೆಯಲ್ಲಿ ಹಾಗೂ ನೆರೆಯ ಗ್ರಾಮವಾದ ಗನ್ನಾಯಕನಹಳ್ಳಿಯಲ್ಲಿ ತಮ್ಮ ಪ್ರಾಥಮಿಕ ಶಿಕ್ಷಣ ಪೂರೈಸಿದರು ಮತ್ತು ಹೈಸ್ಕೂಲ್ ಶಿಕ್ಷಣವನ್ನು ಚಿತ್ರದುರ್ಗದಲ್ಲಿ ಪೂರೈಸಿದರು.

ತಂದೆಯವರಂತೆ ವೀರನಾಯಕರದು ಎರಡು ಸಂಸಾರ. ಮೊದಲನೇ ಪತ್ನಿ ಚಿಕ್ಕಲಿಂಗಮ್ಮನವರು; ಎರಡನೇ ಪತ್ನಿ ಸಾಕಮ್ಮನವರು. ಚಿಕ್ಕಲಿಂಗಮ್ಮನವರಲ್ಲಿ ಇಬ್ಬರು ಹೆಣ್ಣುಮಕ್ಕಳು ಜನಿಸಿದರು. ಅವರೇ ಹೆಚ್.ವಿ. ಜ್ಞಾನರತ್ನಮ್ಮ ಮತ್ತು ಹೆಚ್.ವಿ.ಜಯಮ್ಮ. ಆದರೆ ಚಿಕ್ಕಲಿಂಗಮ್ಮನವರು ವಿಧಿವಶರಾಗಲು ವೀರನಾಯಕರು ಮರುಮದುವೆಯಾದುದು ತಮ್ಮ ಸೋದರತ್ತೆಯ ಮಗಳಾದ ಸಾಕಮ್ಮನವರನ್ನು. ಸಾಕಮ್ಮನವರಲ್ಲಿ ಇಬ್ಬರು ಗಂಡುಮಕ್ಕಳು ಮತ್ತು ಒಬ್ಬಳು ಹೆಣ್ಣುಮಗಳು ಜನಿಸಿದರು. ಅವರುಗಳೇ ಹೆಚ್.ವಿ.ವೀರೇಂದ್ರಸಿಂಹ, ಹೆಚ್.ವಿ.ಪ್ರತಾಪಸಿಂಹ ಹಾಗೂ ಹೆಚ್.ವಿ.ಮುದ್ದುಮಣಿ.

ಹಿಂದೂ ಸಂಪ್ರದಾಯದ ಪ್ರಕಾರ, ತಂದೆಯ ನಂತರ ಹಿರಿಯ ಮಗನೇ ಕೌಟುಂಬಿಕ ಹೊಣೆಗಾರಿಕೆಯನ್ನು ಹೊರಬೇಕಾಗುತ್ತದೆ. ಹಾಗಾಗಿ ವೀರನಾಯಕರು ತಮ್ಮ ಮುಂದಿನ ವಿದ್ಯಾಭ್ಯಾಸದಿಂದ ವಂಚಿತರಾದರು; ಹಾಗೂ ಆರಂಭದಲ್ಲಿ ಅವರು ಸರ್ಕಾರದ ಸೇವೆಗೆ ಸೇರಿ ಶೇಕ್‌ದಾರ ಹುದ್ದೆಯಲ್ಲಿ ಮುಂದುವರೆದರು. ಈ ಹುದ್ದೆ ಕಂದಾಯ ಇಲಾಖೆಗೆ ಸಂಬಂಧಿಸಿದ್ದು. ಇವರು ಸೇವೆಸಲ್ಲಿಸಿದ್ದು ತುಮಕೂರು ಜಿಲ್ಲೆಯ ಮಧುಗಿರಿ ತಾಲ್ಲೂಕಿನ ಪುರವರ ಎಂಬಲ್ಲಿ. ಇವರು ಜನರಿಂದ 'ಶೇಕ್‌ದಾರ್ ವೀರನಾಯಕರು' ಎಂದೇ ಗುರುತಿಸಲ್ಪಡುತ್ತಿದ್ದರು. ಶಿಕ್ಷಕವೃತ್ತಿಯಲ್ಲಿದ್ದ ವೀರಲಕ್ಕಪ್ಪನವರ ಪ್ರಭಾವವು ವೀರನಾಯಕರ ಬದುಕಿನ ಮೇಲೆ ಸಹಜ. ವೀರನಾಯಕರಿಗೆ ಹೆಚ್ಚಿನ ವಿದ್ಯಾಭ್ಯಾಸ ಮಾಡಲು ಸಾಧ್ಯವಾಗದಿದ್ದರೂ ತಮ್ಮ ಉಂಟಾದುದು ಸಹೋದರ ಹೆಚ್.ವಿ.ಪುಟ್ಟನಾಯಕನವರನ್ನಾದರೂ ಓದಿಸಬೇಕೆಂಬ ಬಲವಾದ ಇಚ್ಛೆಯುಳ್ಳವರಾಗಿದ್ದರು. ಅದಕ್ಕಾಗಿ ಅವಿರತ ಪ್ರಯತ್ನಿಸಿ ತಮ್ಮ ಆಕಾಂಕ್ಷೆಯನ್ನು ಈಡೇರಿಸಿಕೊಳ್ಳುವಲ್ಲಿ ಯಶಸ್ವಿಯಾದರು.

ಅಣ್ಣನವರಾದ ವೀರನಾಯಕರಿಂದ ಪ್ರೇರಣೆ-ಪ್ರೋತ್ಸಾಹಗಳನ್ನು ಪಡೆದ ಪುಟ್ಟನಾಯಕರು ಅವರ ಕನಸನ್ನು ನನಸು ಮಾಡಿದರು. ಕೃಷಿವಿಜ್ಞಾನದಲ್ಲಿ ಪದವಿ ಪಡೆದು ಉನ್ನತ ಶಿಕ್ಷಣಕ್ಕಾಗಿ ಜಪಾನ್, ಜರ್ಮನಿ, ಕೆನಡಾಗಳಿಗೆ ಹೋದರು. ನಂತರ ಭಾರತಕ್ಕೆ ಮರಳಿದ ಪುಟ್ಟನಾಯಕರು ಕೃಷಿ ಇಲಾಖೆಯಲ್ಲಿ ಸೇವೆಗೆ ಸೇರಿ, ಕೊನೆಗೆ ಆಡಿಷನಲ್ ಡೈರೆಕ್ಟರ್ ಹುದ್ದೆಯನ್ನು ಸಹಾ ಅಲಂಕರಿಸಿದರು. ಪುಟ್ಟನಾಯಕರು ಅಣ್ಣನವರಿಗೆ ಅನೇಕ ಸಂದರ್ಭಗಳಲ್ಲಿ ಕೃಷಿಗೆ ಸಂಬಂಧಿಸಿದಂತೆ ಅಗತ್ಯ ಸಲಹೆ-ಸೂಚನೆಗಳನ್ನು, ಮಾರ್ಗದರ್ಶನಗಳನ್ನು ನೀಡುತ್ತಿದ್ದರು. ಅಣ್ಣನಿಗೆ ತಕ್ಕ ತಮ್ಮನಾಗಿ ತಮ್ಮ ಕುಟುಂಬದ ಆಗುಹೋಗುಗಳಲ್ಲಿ ಸಕ್ರಿಯರಾಗಿದ್ದು ಅಣ್ಣನ ಮೆಚ್ಚುಗೆಗೆ ಪಾತ್ರರಾಗಿದ್ದ ಪುಟ್ಟನಾಯಕರು, ೧೯೮೮ರಲ್ಲಿ ಹೃದಯಾಘಾತದಿಂದ ಸಾವನ್ನಪ್ಪಿದರು.

ವೀರನಾಯಕರು ಆರು ಅಡಿ ಎತ್ತರದ ಕಪ್ಪುಬಣ್ಣದ ಕಟ್ಟುಮಸ್ತಾದ ವ್ಯಕ್ತಿ. ಅಗಲವಾದ ದುಂಡುಮುಖ, ವಿಶಾಲವಾದ ಹಣೆ, ಸ್ವಲ್ಪ ದಪ್ಪನಾದ ಮೂಗು, ಸ್ವಲ್ಪ ಉದ್ದವಾದ ಕಿವಿಗಳು, ತುಂಬು ಕೆನ್ನೆ; ಇವರ ಚಹರೆಗೆ ಹೇಳಿ ಮಾಡಿಸಿದಂಥ ದುಂಡು ಮೀಸೆ, ದೊಡ್ಡ ಕಣ್ಣುಗಳು. ಕಣ್ಣುಗಳಲ್ಲಿ ಪ್ರಶಾಂತತೆಯ ಮಿನುಗು. ಹಿಂದಕ್ಕೆ ಬಾಚಿದ ತೆಳುಗೂದಲಿನ ಕ್ರಾಪು. ಅವರ ಎದೆಯು ವಿಶಾಲವಾದದ್ದಾಗಿದ್ದು, ಚಹರೆಯಲ್ಲಿ ರಾಜಲಕ್ಷಣವಿದ್ದಿತು. ಅವರ ನಡಿಗೆಯು ವಿಶಿಷ್ಟತೆಯಿಂದ ಕೂಡಿದ್ದಿತು. ಆನೆಯ ನಡಿಗೆಯಂತೆ ಲಯಬದ್ಧವಾಗಿದ್ದಿತು. ಮಾತಿನಲ್ಲಿ ತುಂಬಾ ಗಾಂಭೀರ್ಯತೆವುಳ್ಳವರು. ತಲೆಯೆತ್ತಿನೆಡೆಯುವ ಸ್ವಭಾವದವರು. ಬಿಗಿಯಾದ ಮುಖದಲ್ಲೇ ಮಂದಹಾಸವಿತ್ತು. ಒಟ್ಟಾರೆ ಅವರದು ವರ್ಚಸ್ವೀ ವ್ಯಕ್ತಿತ್ವ.

ವೀರನಾಯಕರು 'ಶೇಕ್‌ದಾರ್' ಹುದ್ದೆಯಲ್ಲಿರುವಾಗ ಭಾರತಾದ್ಯಂತ ಸ್ವಾತಂತ್ರ್ಯ ಸಂಗ್ರಾಮದ ಕಾವು ಹರಡಿತ್ತು. ಅದರಿಂದ ಪ್ರಭಾವಕ್ಕೊಳಗಾದ ವೀರನಾಯಕರು ರಹಸ್ಯವಾಗಿ ಸ್ವಾತಂತ್ರ್ಯಯೋಧರಿಗೆ ಆಹಾರವನ್ನು ಪೂರೈಕೆ ಮಾಡುತ್ತಿದ್ದರು. ಇದನ್ನು ತಿಳಿದ ಬ್ರಿಟಿಷ್ ಸರಕಾರ ವೀರನಾಯಕರಿಗೆ ತೊಂದರೆ ಕೊಟ್ಟಿತು. ಇಂಥಾ ಸರಕಾರದಲ್ಲಿ ಕೆಲಸ ಮಾಡಲು ಇಷ್ಟವಿಲ್ಲದ ವೀರನಾಯಕರು, ತಮ್ಮ ಹುದ್ದೆಗೆ ರಾಜಿನಾಮೆ ನೀಡಿ ಸ್ವಗ್ರಾಮವಾದ ಹರ್ತಿಕೋಟೆಗೆ ಹಿಂದಿರುಗಿದರು.

ಗಾಂಧಿಜೀಯ ಪ್ರಭಾವಕ್ಕೊಳಗಾಗಿದ್ದವರು ವೀರನಾಯಕರು. ಹೀಗಾಗಿ ಸಂಪೂರ್ಣವಾಗಿ ಖಾದಿಯನ್ನು ಧರಿಸುತ್ತಿದ್ದರು. ಅವರ ಉಡುಪು ತುಂಬಾ ಸರಳವಾಗಿದ್ದಿತು. ಬಿಳಿ ಜುಬ್ಬ, ಅದರ ಮೇಲೆ ಒಂದು ಫುಲ್ ಕೋಟು ಮತ್ತು ಫುಲ್ ಬಟನ್ಸ್‌ನ ಅಂಗಿ; ಕೆಲವೊಮ್ಮೆ ಮೇಲಿನ ಅಂಗಿಯು ಅರ್ಧತೋಳುಗಳಿಂದ ಕೂಡಿದ ಮೋಟು ಅಂಗಿ ಆಗಿರುತ್ತಿತ್ತು. ಹೆಗಲ ಮೇಲೆ ಒಂದು ಬಿಳಿ ಶಲ್ಯವಿದ್ದು, ಅದನ್ನು ಚೆನ್ನಾಗಿ ಮಡಚಿ ಇಸ್ತ್ರಿ ಮಾಡಲಾಗಿರುತ್ತಿತ್ತು. ಅವರು ಉಡುತ್ತಿದ್ದ ಕಚ್ಚೆಪಂಚೆಯಾದರೂ ತೀಡಿದ ಅಂಚಿನ ನೆರಿಗೆಯ ಅಗಲವಾದ ಬುಗಡಿ ಅಂಚಿನದಾಗಿತ್ತು. ಗ್ರಾಮದ ಗಟ್ಟಿಯಾದ, ದಪ್ಪವಾದ ಚಪ್ಪಲಿಗಳು ಕಾಲಲ್ಲಿರುತ್ತಿದ್ದವು. ಸದಾ ಅವರ ಕೈಯಲ್ಲೊಂದು ಪುಸ್ತಕವಿರುತ್ತಿದ್ದುದು ವಿಶೇಷ.

ವೀರನಾಯಕರ ಮನೆತನದ ಮೂಲವೃತ್ತಿಯೇ ವ್ಯವಸಾಯ. ವೀರನಾಯಕರಿಗೆ ಸಹಾ ವ್ಯವಸಾಯದಲ್ಲಿ ತುಂಬಾ ಆಸಕ್ತಿಯಿತ್ತು. ಹಾಗಾಗಿ ವ್ಯವಸಾಯ ಮತ್ತು ರೈತರ ಜೊತೆಗೆ ಮಾತು-ಕಥೆ, ವ್ಯವಸಾಯ ಸಂಬಂಧವಾಗಿ ವಿಚಾರ ವಿನಿಮಯ, ಚರ್ಚೆ ಮೊದಲಾದವುಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ವೀರನಾಯಕರ ಸಹೋದರ ಪುಟ್ಟನಾಯಕರು ಕೃಷಿವಿಜ್ಞಾನದಲ್ಲಿ ಉನ್ನತಶಿಕ್ಷಣ ಪಡೆದುದನ್ನು ನೋಡಿದರೆ ವೀರನಾಯಕರ ಕುಟುಂಬಕ್ಕೆ ಒಕ್ಕಲುತನವು ಪ್ರಿಯವಾದುದಾಗಿದ್ದಿತ್ತೆಂದು ಅರ್ಥವಾಗುತ್ತದೆ. ಹಳ್ಳಿಯಲ್ಲೇ ಹುಟ್ಟಿ ಬೆಳೆದು ಹಳ್ಳಿಯವರಿಗಾಗಿಯೇ ತಮ್ಮ ಬದುಕು ಮೀಸಲಿಟ್ಟವರು ವೀರನಾಯಕರು. ಅವರು ವ್ಯವಸಾಯರಂಗದಲ್ಲೇ ತಮ್ಮನ್ನು ತೊಡಗಿಸಿಕೊಂಡಿದ್ದರೆಂಬುದಕ್ಕೆ 'ಇಪ್ಪತ್ತೈದುವರ್ಷಗಳ ಸ್ವಾತಂತ್ರ್ಯದ ನಂತರ ಮೈಸೂರುರಾಜ್ಯದ ರೈತ' ಎನ್ನುವ ವಿಷಯದ ಬಗ್ಗೆ ಒಮ್ಮೆ ಚಿತ್ರದುರ್ಗ ಜಿಲ್ಲೆಯ ರೈತ ಪ್ರತಿನಿಧಿಯಾಗಿ ರೇಡಿಯೋ ಭಾಷಣ ಮಾಡಿದುದೇ ಸಾಕ್ಷಿ.

ವೀರನಾಯಕರ ಜೀವನ ಶೈಲಿ ವಿಶಿಷ್ಟವಾದುದು. ಅಧ್ಯಯನಶೀಲತೆಯು ಅವರನ್ನು ಸುಸಂಸ್ಕೃತರನ್ನಾಗಿ ಮಾಡಿದ್ದಿತು. ಅವರ ಅಪಾರ ಜ್ಞಾನವು ಅವರಿಗಷ್ಟೇ ಸೀಮಿತವಾಗದೆ ಇಡೀ ಚಿತ್ರದುರ್ಗ ಜಿಲ್ಲೆಯ ಚರಿತ್ರೆ ಕ್ಷೇತ್ರಕ್ಕೆ ಪ್ರಯೋಜನಕ್ಕೆ ಬಂದಿತು.

ವೀರನಾಯಕರು ಸಾಹಸಿ ಪ್ರವೃತ್ತಿಯವರು ಎಂಬುದಕ್ಕೆ ಅವರ ಕ್ರಿಯಾಶೀಲ ಕಾರ್ಯವೈಖರಿಯೇ ಸಾಕ್ಷಿ. ಇವರು ಬೆಂಗಳೂರಿನಲ್ಲಿ ೧೯೭೦ರಲ್ಲಿ 'ವಾಲ್ಮೀಕಿ ಪ್ರಿಂಟರ್ಸ್' ಎಂಬ ಮುದ್ರಾಣಾಲಯವನ್ನು ಸ್ಥಾಪಿಸಿದರು. ಜೊತೆಗೆ 'ಬಿಚ್ಚುಗತ್ತಿ' ಎಂಬ ವಾರಪತ್ರಿಕೆಯನ್ನು ಆರಂಭಿಸಿದರು. ಆ ದಿನಗಳಲ್ಲಿ ಪತ್ರಿಕೆಯನ್ನು ನಡೆಸುವುದು ಅಷ್ಟೊಂದು ಸುಲಭದ ಕೆಲಸವಾಗಿರಲಿಲ್ಲ. ಇದರಲ್ಲಿ ವೀರನಾಯಕರು ತಮ್ಮನ್ನು ಪೂರ್ಣವಾಗಿ ತೊಡಗಿಸಿಕೊಂಡರು. ಈ ಪತ್ರಿಕೆಯ ಸಲಹಾ ಮಂಡಲಿಯ ಅಧ್ಯಕ್ಷರಾದರು. ತಮ್ಮ ಪತ್ರಿಕೆಯ ವಿಷಯವಾಗಿ ಅವರು ಹೇಳಿದ ಮಾತುಗಳನ್ನು ಇಲ್ಲಿ ಈ ಕೆಳಗಿನಂತೆ ಸಂಗ್ರಹಿಸಬಹುದು :

'ನಮ್ಮ ರಾಷ್ಟ್ರೀಯ, ರಾಜ್ಯದ ನಾಯಕರ, ರಾಷ್ಟ್ರಪ್ರೇಮಿಗಳ, ರಾಷ್ಟ್ರಭಕ್ತರ ಹಿನ್ನೆಲೆ, ಚರಿತ್ರೆ, ಅವರ ಆದರ್ಶಮಯ ಜೀವನ-ಸಾಧನೆಗಳು, ಅವರಲ್ಲಿದ್ದ ಕೆಚ್ಚು, ಶೌರ್ಯ, ವೀರತನ ಮೊದಲಾದವುಗಳನ್ನು ಕುರಿತಾದ ವೈಚಾರಿಕ ಲೇಖನಗಳನ್ನು ಈ 'ಬಿಚ್ಚುಗತ್ತಿ' ಪತ್ರಿಕೆಯ ಮೂಲಕ ಓದುಗರಿಗೆ ತಲುಪಿಸುವುದು ಮುಖ್ಯ ಉದ್ದೇಶವಾಗಿದೆ. ಈ ಕುರಿತಾಗಿ ಜನರ ಕಣ್ಣುಗಳಿಂದ ದೂರವಾದ ಶಾಸನಗಳು, ತಾಳೆಗರಿಯ ಓಲೆಗಳು, ಹಳೆಕಾಲದ ಕಾಗದ-ಪತ್ರಗಳು, ಪತ್ರವ್ಯವಹಾರಗಳು, ಜಯರೇಖೆಗಳು, ಜಾನಪದ, ಕೋಲಾಟಪದ, ಲಾವಣಿಗಳು, ವೀರಗಲ್ಲುಗಳು ಇಂಥಾ ಅನೇಕ ಮೂಲಗಳಿಂದ ಕ್ರೋಢೀಕರಿಸಿದ ಪ್ರಮುಖವಾದ ಚರಿತ್ರೆಯ ಚಿತ್ರಣವು ನಮ್ಮ ಮನಸ್ಸಿಗೆ ಗೋಚರಿಸಬೇಕಾಗಿದೆ. ಇಂದಿನ ದಿನಗಳಲ್ಲಿ ರಾಷ್ಟ್ರದ ರಕ್ಷಣೆಯ ಹಿತದೃಷ್ಟಿಯಿಂದ ಬಾಲಕರ ಮತ್ತು ಯುವಶಕ್ತಿಯ ಹೃದಯದಲ್ಲಿ ರಾಷ್ಟ್ರೀಯವಾದಿಗಳ ಬದುಕು ಮುದ್ರಿಸಬೇಕಾಗಿದೆ. ಮುಂದೆ ಬರುವ ಪೀಳಿಗೆಗೆ ದಾರಿದೀಪವಾಗಬೇಕಾಗಿದೆ.'

'ಬಿಚ್ಚುಗತ್ತಿ' ಪತ್ರಿಕೆಯ ಪ್ರಕಟಣೆ ವೀರನಾಯಕರ ಜೀವನದಲ್ಲೊಂದು ಮರೆಯಲಾಗದ ದೊಡ್ಡ ಸಾಧನೆ. ವಿದ್ಯಾರ್ಥಿಗಳು, ಉದಯೋನ್ಮುಖರು, ಅವಕಾಶ ವಂಚಿತರು ಹಾಗೂ ದಲಿತ ಬರಹಗಾರರಿಗೆ ಪ್ರೇರಣೆ-ಪ್ರೋತ್ಸಾಹಗಳನ್ನು ದೊರಕಿಸಿಕೊಡಬೇಕೆನ್ನುವುದು ತಮ್ಮ ಪತ್ರಿಕೆಯ ಮಹತ್ವಾಕಾಂಕ್ಷೆಯಾಗಿದೆಯೆಂಬುದಾಗಿ ಅವರು ಬರೆದಿದ್ದಾರೆ. ಆದರೆ ಈ ಪತ್ರಿಕೆಯು ಸ್ವಲ್ಪಕಾಲದ ನಂತರ ಕಾರಣಾಂತರಗಳಿಂದ ನಿಂತುಹೋಯಿತು. ತಮ್ಮ ಪತ್ರಿಕೆಯ ಮೂಲಕ ಚರಿತ್ರೆಯ ಬಗ್ಗೆ ಮತ್ತು ದಲಿತರ ಏಳಿಗೆಯ ಬಗ್ಗೆ ಇಟ್ಟುಕೊಂಡ ನಿರೀಕ್ಷೆಗಳು ಈಡೇರದಿದ್ದುದು ಅವರಿಗೆ ನೋವಿನ ಸಂಗತಿಯಾಯಿತು.

ವೀರನಾಯಕರೊಬ್ಬ ಉತ್ತಮ ಸಂಘಟನಾಕಾರರು. ಈ ಸಂಘಟನಾ ಚಾತುರ್ಯತೆ ಅವರಲ್ಲಿ ಬಾಲ್ಯದಿಂದಲೇ ಕರಗತವಾದಂಥದು. ಕಂದಾಯ ಇಲಾಖೆಯ ಅನುಭವವೂ ಅವರ ಸಂಘಟನಾ ಸಾಮರ್ಥ್ಯಕ್ಕೆ ಪೂರಕ ಮತ್ತು ಪ್ರೇರಕವಾಗಿತ್ತು. ವೀರನಾಯಕರ ಪ್ರವೃತ್ತಿ ಮತ್ತು ವೃತ್ತಿಗಳು ಅವರ ವ್ಯಕ್ತಿತ್ವ ವಿಕಾಸಕ್ಕೆ ನೆರವಾಗಿದ್ದವು.

ಜನರ ಸೇವೆಯೇ ಜನಾರ್ಧನನ ಸೇವೆ ಎಂದು ತಿಳಿದಿದ್ದ ವೀರನಾಯಕರು, ಯಾವುದೇ ವಿಷಯದಲ್ಲಿ ಹಾಗೂ ಸಂದರ್ಭದಲ್ಲಿ ಸೂಕ್ತ ತೀರ್ಮಾನ ತೆಗೆದುಕೊಳ್ಳುವುದರಲ್ಲಿ ಕ್ಷಿಪ್ರತೆಯನ್ನು ಅನುಸರಿಸುತ್ತಿದ್ದರು. ಆದರೆ ಅವರು ನಿಧಾನಿಸುತ್ತಿದ್ದುದು ವಿವೇಚನಾ ಹಂತದಲ್ಲಿ ಮಾತ್ರ. ಸಂಘಟನೆಯ ವಿಚಾರದಲ್ಲಿ ವೀರನಾಯಕರ ನಿಲುವು ಸ್ಪಷ್ಟವಾಗಿದ್ದಿತು. ಕೇವಲ ಜನರನ್ನು ಗುಂಪುಗೂಡಿಸುವುದು ಸಂಘಟನೆಯಲ್ಲ. ಸಂಘಟನೆಯೆಂದರೆ ಒಬ್ಬ ನಾಯಕ ತನ್ನ ಗ್ರಾಮದ ಅಥವಾ ಊರಿನ ಹಿಂದಿನ, ಇಂದಿನ ಭವಿಷ್ಯವನ್ನು ಕುರಿತು ಆಳವಾದ ತಿಳುವಳಿಕೆಯನ್ನು ಹೊಂದಿರುವುದು; ಹಾಗೂ ಆ ಜ್ಞಾನದಿಂದ ಊರಿನ ಸಮಸ್ತರನ್ನು, ಬಂಧು-ಮಿತ್ರರನ್ನು ಮತ, ಜಾತಿ, ಪಂಥ, ಮೇಲು-ಕೀಳು ಎನ್ನದೆ ಪ್ರಗತಿಪಥದಲ್ಲಿ ಜೊತೆಗೆ ಕರೆದೊಯ್ಯುವುದು.

ವೀರನಾಯಕರು ಜಾತಿವ್ಯವಸ್ಥೆಯನ್ನು ಪುರಸ್ಕರಿಸಿದವರಲ್ಲ. ಎಲ್ಲಾ ಜಾತಿಯವರೊಡನೆ ಆತ್ಮೀಯವಾಗಿ ಬೆರೆಯುತ್ತಿದ್ದರು. ಎಲ್ಲ ವರ್ಗದವರನ್ನು ಸಮಾನ ದೃಷ್ಟಿಯಿಂದ ನೋಡುವ ವೈಚಾರಿಕಪ್ರಜ್ಞೆ ಅವರಲ್ಲಿತ್ತು. ವಯಸ್ಸಿನ ತಾರತಮ್ಯವಿಲ್ಲದೆ ಎಲ್ಲರೊಂದಿಗೆ ಸಮಾನವಾಗಿ ವ್ಯವಹರಿಸುವ ವಿವೇಕ ಅವರಲ್ಲಿತ್ತು. ಈ ಕಾರಣಕ್ಕಾಗಿಯೇ ಉತ್ತಮ ಜನಸೇವೆ ಮಾಡುವಲ್ಲಿ ಮತ್ತು ಜನರನ್ನು ಸಂಘಟಿಸುವಲ್ಲಿ ಅವರು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದರು.

ವೀರನಾಯಕರ ಮೇರುವ್ಯಕ್ತಿತ್ವದ ಇನ್ನೊಂದು ವಿಶಿಷ್ಟತೆಯೆಂದರೆ, ಸಹಜತೆಯಿಂದ ಕೂಡಿದ ಗಾಂಭೀರ್ಯತೆ. ವೀರನಾಯಕರಲ್ಲಿ ಈ ಗುಣ ಅಪಾರವಾಗಿದ್ದಿತು. ಅವರನ್ನು ನೋಡಿದ ಯಾರಿಗಾದರೂ ಅವರನ್ನು ನಾಯಕನ ಪಾತ್ರಕ್ಕೆ ಹೋಲಿಸಿ ನೋಡುವಷ್ಟು ಪ್ರಭಾವ ಉಂಟಾಗುತ್ತಿತ್ತು. ಇದಕ್ಕೆ ಪೂರಕವಾಗಿ ಉದಾಹರಣೆಯೊಂದನ್ನು ಇಲ್ಲಿ ಉಲ್ಲೇಖಿಸಬಹುದು. ಒಮ್ಮೆ ಶ್ರೀಯುತ ಬೆಳಗೆರೆ ಕೃಷ್ಣಶಾಸ್ತ್ರಿಯವರು 'ಪ್ರತಾಪಸಿಂಹ' ನಾಟಕದ ಹಸ್ತಪ್ರತಿಯನ್ನು ಪರಿಶೀಲಿಸುತ್ತಿದ್ದರು. ಅವರು ಅದನ್ನು ಓದಿದ ಮೇಲೆ ಪ್ರತಾಪಸಿಂಹನ ಪಾತ್ರಕ್ಕೆ ಒಪ್ಪುವಂಥವರೆಂದರೆ ಸಹಜ ಗಾಂಭೀರ್ಯದ ವ್ಯಕ್ತಿಯಾದ ವೀರನಾಯಕರೇ ಎಂದು ಮನಸ್ಸಿನಲ್ಲಿಯೇ ಕಲ್ಪಿಸಿಕೊಳ್ಳುತ್ತಿದ್ದರಂತೆ.

ವೀರನಾಯಕರು ಉತ್ತಮ ವಾಗ್ಮಿಗಳಾಗಿದ್ದರು. ಯಾವುದೇ ವಿಷಯವನ್ನಾದರೂ ಕೇಳುಗರಿಗೆ ಸ್ಪಷ್ಟವಾಗಿ ತಿಳಿಯುವಂತೆ ಹೇಳಬಲ್ಲ ಸಾಮರ್ಥ್ಯ ಅವರಲ್ಲಿದ್ದಿತು. ಅವರು ಮಂಡಿಸುತ್ತಿದ್ದ ವಿಷಯಗಳು ಅರ್ಥವತ್ತಾಗಿರುತ್ತಿದ್ದವು. ಹರ್ತಿಕೋಟೆಯವರೇ ಆದ ಪ್ರಸಿದ್ಧ ಕಲಾವಿದ ಪಿ.ಆರ್.ತಿಪ್ಪೇಸ್ವಾಮಿಯವರು ವೀರನಾಯಕರ ಮಾತಿನ ಶೈಲಿಯನ್ನು ಅಪಾರವಾಗಿ ಮೆಚ್ಚಿಕೊಂಡಿದ್ದರು. ಒಮ್ಮೆ ಚಿತ್ರದುರ್ಗ ಜಿಲ್ಲೆಯ ಹೆಸರಾಂತ 'ಇತಿಹಾಸ ಸಂಶೋಧನ ಪ್ರಸಕ್ತ' ಹುಲ್ಲೂರು ಶ್ರೀನಿವಾಸ ಜೋಯಿಸರು ಹರ್ತಿಕೋಟೆಗೆ ಬಂದಿದ್ದರು. ಆ ಸಂದರ್ಭದಲ್ಲಿ ವೀರನಾಯಕರು ಹರ್ತಿಕೋಟೆಯ ಸ್ಥಳನಾಮ ಕುರಿತು ಜೋಯಿಸರಿಗೆ ಮನಮುಟ್ಟುವಂತೆ ವಿವರಿಸಿದ್ದುದುಂಟು. ಇದನ್ನು ಪ್ರತ್ಯಕ್ಷವಾಗಿ ಕಂಡ ತಿಪ್ಪೇಸ್ವಾಮಿಯವರು, ವೀರನಾಯಕರು ಮಾತಿನ ಮೇಲೆ ಸಾಧಿಸಿದ್ದ ಹಿಡಿತ, ವಿಷಯ ನಿರೂಪಣೆಯಲ್ಲಿ ಹೊಂದಿದ್ದ ಗತ್ತಿನ ಬಗ್ಗೆ ಹೆಚ್ಚು ಪ್ರಭಾವಿತರಾದರು.

ವೀರನಾಯಕರು ಸಭೆ-ಸಮಾರಂಭ-ಸಮ್ಮೇಳನಗಳಲ್ಲಿ ಭಾಗವಹಿಸಿದಾಗ ಅವರ ಮಾತಿನ ಶೈಲಿಯು ಬಹು ಆಕರ್ಷಣೀಯವಾಗಿರುತ್ತಿತ್ತು. ಅವರು ನಿತ್ಯಬದುಕಿನ ಎಲ್ಲರ ಅನುಭವಗಳನ್ನೆ ಮತ್ತೆ ಮತ್ತೆ ಆಸಕ್ತಿಯಿಂದ ಕೇಳುವಂತೆ ಜನರಲ್ಲಿ ಕುತೂಹಲ ಮೂಡಿಸುತ್ತಿದ್ದರು. ಅವರು ಮಂಡಿಸುತ್ತಿದ್ದ ನೇರ ವಿಚಾರಗಳಿಗೆ ಯಾರಿಂದಲೂ ವಿರೋಧವಾಗಲಿ, ಅಡಚಣೆಯಾಗಲಿ ಕಂಡುಬರುತ್ತಿರಲಿಲ್ಲ. ಅವರ ಭಾಷಣವು ಸಮತೋಲನದೊಡನೆ ನೇರ ಹಾಗೂ ನಿಖರ ವಸ್ತು-ವಿಷಯಗಳಿಂದ ಕೂಡಿರುತ್ತಿತ್ತು. ತುಂಬಿ ತುಳುಕುವ ಸಭೆಯು ಇವರ ಮಾತಿನ ಧಾಟಿಗೆ ಮರುಳಾಗಿ ನಿಶ್ಯಬ್ದವಾಗಿ ಆಲಿಸುತ್ತಿತ್ತು. ಇದು ವೀರನಾಯಕರು ತಮ್ಮ ಸ್ವಯಂ ಶಕ್ತಿಯಿಂದ ಮೈಗೂಡಿಸಿಕೊಂಡ ಪ್ರತಿಭೆಯಾಗಿತ್ತು. ವೀರನಾಯಕರಲ್ಲಿದ್ದ ಇಂಥಾ ಸಾಮರ್ಥ್ಯವನ್ನು ಲೇಖಕ-ಪತ್ರಕರ್ತ ಬಿ.ತಿಪ್ಪಣ್ಣ ಮರಿಕುಂಟೆಯವರು ಗುರುತಿಸಿರುವುದು ಹೀಗೆ : "ಕಿಕ್ಕಿರಿದು ತುಂಬಿದ್ದ ಆ ಸಮಾಲೋಚನಾ ಸಭೆಯಲ್ಲಿ ನಿಚ್ಚಳವಾಗಿ ಪ್ರತಿಯೊಂದು ಶಬ್ದವನ್ನು ತೂಕಮಾಡಿ ಸಮಯೋಚಿತವಾಗಿ ಮಾತನಾಡುವ ಒಬ್ಬ ಮುಖಂಡರನ್ನು ಮೊದಲಬಾರಿಗೆ ಕಂಡೆ. ಅವರ ಬಗ್ಗೆ ಪರಿಚಯಕ್ಕೆ ಮೊದಲೇ ಗೌರವ ಮೂಡಿಬಂದಿತ್ತೆಂದರೆ ಅತಿಶಯೋಕ್ತಿಯಾಗಲಾರದು. ಆ ವ್ಯಕ್ತಿಯೇ ಶ್ರೀ ಹೆಚ್.ವಿ.ವೀರನಾಯಕರು. ಆ ದಿನದ ಸಭೆಯ ಆತ್ಮೀಯ ಚರ್ಚೆಯ ಸಂದರ್ಭದಲ್ಲೂ ಅವರು ಭೀಷ್ಮಾಚಾರ್ಯರಂತಿದ್ದರು. ಅವರ ಮಾತಿಗೆ ಆ ಸಭೆಯಲ್ಲಿ ಅಷ್ಟೊಂದು ಗೌರವವಿತ್ತು. ಅದು ಅವರು ಬೆಳೆಸಿಕೊಂಡ ಸ್ವಂತ ಸಾಮರ್ಥ್ಯವಾಗಿತ್ತು. ಅಲ್ಲಿಯವರೆಗೆ ಅವರ ಹೆಸರನ್ನು ಮಾತ್ರ ಕೇಳಬಲ್ಲನಾಗಿದ್ದ ನಾನು, ಅವರ ಜೊತೆಗೆ ಕುಳಿತು ಮಾತನಾಡುವ ಅವಕಾಶ ಪಡೆದಿದ್ದಕ್ಕಾಗಿ ಮನಸ್ಸಿನಲ್ಲಿಯೇ ಹರ್ಷಪಟ್ಟಿದ್ದೆ."[೧]

ತುಂಬಾ ನಿಖರವಾದ ಅಭಿಪ್ರಾಯ ಎಂ.ವಿ.ಚಿತ್ರಲಿಂಗಯ್ಯನವರದು. ಚಿತ್ರಲಿಂಗಯ್ಯನವರು ವೀರನಾಯಕರನ್ನು ಗ್ರಹಿಸಿದ ರೀತಿಯೇ ಅಪರೂಪದ್ದು. ಅವರು ಬರೆದಿರುವಂತೆ, ಹೃದಯ ವೈಶಾಲ್ಯದ ದೊಡ್ಡವ್ಯಕ್ತಿ ವೀರನಾಯಕರು. ಅವರ ಕುರಿತು ಎಲ್ಲಿಯೂ, ಯಾವ ವಿಷಯದಲ್ಲಿಯೂ ಅಪಪ್ರಚಾರಕ್ಕೆ ಆಸ್ಪದವಿರಲಿಲ್ಲ. ದಿಟ್ಟ ವ್ಯಕ್ತಿತ್ವದ, ಉತ್ತಮ ಗುಣಗಳುಳ್ಳ ತಾಳ್ಮೆಯ ಮೂರ್ತಿ. ಜಾತಿ, ಮತ, ವರ್ಗ ಮೊದಲಾದ ವೈಷಮ್ಯಗಳ ಚಿಕ್ಕ ಭಾವನೆಯವರಲ್ಲ. ಉಳ್ಳವರು, ಇಲ್ಲದವರು ಎಂಬ ತಾರತಮ್ಯ ನೀತಿ ಅವರದಲ್ಲ. ಇಲ್ಲದವರಿಗೆ, ನಿರ್ಗತಿಕರಿಗೆ ಕರುಣೆದೋರಿ ಧಾರಾಳಭಾವದಿಂದ ನೆರವು ನೀಡುತ್ತಿದ್ದರು. ವೀರನಾಯಕರ ಸೋದರ ಪುಟ್ಟನಾಯಕರಲ್ಲಿ ಸಾತ್ವಿಕಗುಣಗಳಿದ್ದರೆ, ವೀರನಾಯಕರಲ್ಲಿ ರಾಜಸಗುಣಗಳಿದ್ದವು. ಹಾಗಾಗಿ ಆಳ್ವಿಕೆ-ಆಡಳಿತ ಸ್ವರೂಪದ ವಿಚಾರಗಳು ವೀರನಾಯಕರಲ್ಲಿ ಕಾಣಸಿಗುತ್ತವೆ. ಆದ್ದರಿಂದ ಅವರು ಜನನಾಯಕನಾಗಿ, ಪ್ರಮುಖವ್ಯಕ್ತಿಯಾಗಿ ಕಂಡುಬಂದರು. ಯಾವುದೇ ವಿಚಾರವನ್ನಾದರೂ ವಾಸ್ತವದ ನೆಲೆಯಲ್ಲಿ ವಿಶ್ಲೇಷಣೆ ಮಾಡುವವರೆಗೂ ಅದರ ವಿಚಾರವಾಗಿ ಅವರು ತಮ್ಮ ನಿಲುವನ್ನು ವ್ಯಕ್ತಪಡಿಸುತ್ತಿರಲಿಲ್ಲ.

ವೀರನಾಯಕರು ತಮ್ಮ ಊರಾದ ಹರ್ತಿಕೋಟೆಗೆ ಮಾತ್ರ ಸೀಮಿತರಾಗಿರದೆ, ಆಸುಪಾಸಿನ ಹತ್ತಾರು ಹಳ್ಳಿಗಳಿಗೆ ಚಿರಪರಿಚಿತರಾಗಿದ್ದರು. ಜನರಲ್ಲಿ ವೀರನಾಯಕರೆಂದರೆ ಅತೀವ ಆತ್ಮೀಯತೆ, ಅಭಿಮಾನ, ಗೌರವಗಳು ತುಂಬಿಬರುತ್ತಿದ್ದವು. ಮಾರ್ಗದಲ್ಲಿ ನಮಸ್ಕಾರ, ಪ್ರತಿನಮಸ್ಕಾರಗಳ ನಡುವೆಯೇ ಅವರ ಹಾದಿ

ಪೂರ್ಣಗೊಳ್ಳುತ್ತಿತ್ತು. ಇಂಥಾ ಅನೇಕ ರೀತಿಯ ಗೌರವಾದರಗಳಿಗೆ ಪಾತ್ರರಾಗಿದ್ದ ವೀರನಾಯಕರ ವ್ಯಕ್ತಿತ್ವವು ಪರಿಪೂರ್ಣವಾದುದಾಗಿದ್ದಿತೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ವೀರನಾಯಕರು ತಮ್ಮ ಸದ್ವರ್ತನೆ-ಸಂಪನ್ನತೆಗಳ ಕಾರಣವಾಗಿ ಕೀರ್ತಿವಂತರಾದವರು. ಅವರ ಮೌಲ್ಯಾತ್ಮಕ ಗುಣಗಳು ಅವರ ಕುಟುಂಬದ ಇತರ ಸದಸ್ಯರ ಮೇಲೂ ಪ್ರಭಾವಬೀರಿದವು. ಮನೆಯ ಸದಸ್ಯರಲ್ಲಿ ಕೆಲವರು ಒಳ್ಳೆಯ ವಿದ್ಯಾಭ್ಯಾಸವನ್ನು ಪಡೆದುಕೊಂಡರು. ಕೃಷಿ, ಆಡಳಿತ, ಸಾಹಿತ್ಯ, ಕಲೆ ಮತ್ತು ಸಂಸ್ಕೃತಿ- ಇಂಥಾ ಹತ್ತು-ಹಲವು ಕ್ಷೇತ್ರಗಳಲ್ಲಿ ಗಣನೀಯ ಸೇವೆಸಲ್ಲಿಸಿದ್ದಾರೆ. ಇವರು ಪೋಷಿಸಿ ಬೆಳೆಸಿದ ಒಂದು ಪ್ರತಿಭೆ ವಿದೇಶದಲ್ಲಿಯೂ ಖ್ಯಾತಿ ಪಡೆದುಕೊಂಡಿತು. ಇದು ವೀರನಾಯಕರ ಪ್ರೀತಿಯ ಅಳಿಯ ಡಾ.ಜಿ.ರಂಗಯ್ಯನವರಿಗೆ ಸಂಬಂಧಿಸಿದ್ದು. ಇನ್ನೊಂದು ಪ್ರತಿಭೆಯೆಂದರೆ ಅವರ ಎರಡನೇ ಮಗ. ಹೆಚ್.ವಿ.ಪ್ರತಾಪಸಿಂಹ. ಅತ್ಯುತ್ತಮ ಕಲಾವಿದರಾದ ಇವರು ಈಗ ನ್ಯೂಯಾರ್ಕ್‌ನಲ್ಲಿ ನೆಲೆಸಿದ್ದಾರೆ. ಜೊತೆಗೆ ವೀರನಾಯಕರ ಸಹಕಾರದಿಂದ ಹಳ್ಳಿಯ ಒಬ್ಬಿಬ್ಬರು ವಿದೇಶಗಳಲ್ಲಿ ಅಧ್ಯಯನ ಮಾಡಿಬಂದಿರುವುದುಂಟು.

ವೀರನಾಯಕರು ಸ್ವತಃ ಗೌರವ-ಸನ್ಮಾನಗಳನ್ನು ಸ್ವೀಕರಿಸುವುದರ ಜೊತೆಗೆ ಇತರರನ್ನೂ ಸನ್ಮಾನಿಸಿ ಗೌರವಿಸುತ್ತಿದ್ದರು. ಗುರು-ಹಿರಿಯರು, ಸಜ್ಜನರು, ಸೇವಾನಿಷ್ಠರೆಂದರೆ ಅವರಿಗೆ ಅಪಾರ ಅಭಿಮಾನ. ಒಮ್ಮೆ ಭೂದಾನ ಚಳುವಳಿಯ ನೇತಾರರಾದ ವಿನೋಬಾ ಭಾವೆಯವರ ಅನುಯಾಯಿ ಕುಟ್ಟೀಜಿಯವರು ಹರ್ತಿಕೋಟೆಗೆ ಭೇಟಿಕೊಟ್ಟಿದ್ದ ಸಂದರ್ಭ. ಊರು ಇನ್ನೂ ಅರ್ಧಮೈಲಿ ದೂರವಿರುವಾಗಲೇ ವೀರನಾಯಕರು ಧಾವಿಸಿ ಕುಟ್ಟೀಜಿಯವರನ್ನು ಸಂಭ್ರಮ-ಸಡಗರಗಳಿಂದ ಎದುರುಗೊಂಡು, ಕೊರಳಿಗೆ ಹಾರಹಾಕಿ ಪ್ರೀತಿಪೂರ್ವಕ ಊರಿಗೆ ಕರೆತಂದರು. ತಮ್ಮ ಊರಿನ ಭಜನೆ ಸಂಘದವರಿಂದ ಭಕ್ತಿಗೀತೆಗಳನ್ನು ಹಾಡಿಸುತ್ತಾ, ಜಯಘೋಷಗಳೊಂದಿಗೆ ಬೀದಿಬೀದಿಗಳಲ್ಲೂ ಮೆರವಣಿಗೆ ಮಾಡಿಸಿದರು.

ವೀರನಾಯಕರು ಗುರು-ಹಿರಿಯರನ್ನು, ವೃದ್ಧರನ್ನು, ಮಹಿಳೆಯರನ್ನು ಅವರವರ ವೃತ್ತಿಧರ್ಮಕ್ಕೆ, ವಯೋಧರ್ಮಕ್ಕೆ, ಮನೋಧರ್ಮಕ್ಕೆ ಅನುಸಾರವಾಗಿ ಅಣ್ಣ, ಅಕ್ಕ, ತಂಗಿ, ತಮ್ಮ ಎಂದೆಲ್ಲಾ ಗೌರವಪೂರ್ವಕ ಸಂಬೋಧಿಸುತ್ತಿದ್ದರು. ವಯಸ್ಸಿನಲ್ಲಿ ತಮಗಿಂತಲೂ ಚಿಕ್ಕವರನ್ನು ವಾತ್ಸಲ್ಯಭರಿತರಾಗಿ ಮಾತನಾಡಿಸುತ್ತಿದ್ದರು. ಹಿರಿಯರೊಡನೆ ಭಕ್ತಿ-ಗೌರವಗಳಿಂದ ನಡೆದುಕೊಳ್ಳುತ್ತಿದ್ದರು. ಇಂಥಾ ಹೃದಯ ವೈಶಾಲ್ಯವನ್ನು ಹೊಂದಿದ್ದ ದೊಡ್ಡವ್ಯಕ್ತಿಯಾಗಿ ವೀರನಾಯಕರು ಕಾಣಿಸಿಕೊಂಡಿದ್ದರೆ ಅದು ಅವರಿಗೆ ತೀರಾ ಸಹಜವಾದ ನಡೆಯಾಗಿದ್ದಿತು.

ವೀರನಾಯಕರು ವಿದ್ಯಾರ್ಥಿಯಾಗಿದ್ದಾಗಲೇ ನಮ್ಮ ಚರಿತ್ರೆಯ ಬಗೆಗೆ ಅಪಾರ ಆಸಕ್ತಿ-ಅಭಿಮಾನಗಳನ್ನು ಬೆಳೆಸಿಕೊಂಡಿದ್ದರು. 'ಬೆಳೆಯುವ ಪೈರನ್ನು ಮೊಳಕೆಯಲ್ಲೆ ಕಾಣು' ಎಂಬ ನಾಣ್ಣುಡಿಯಂತೆ, ವೀರನಾಯಕರು ಮುಂದೊಂದು ದಿನ ಪ್ರಾದೇಶಿಕ ಇತಿಹಾಸಕಾರರಾಗಿ ಬೆಳೆಯಲು ಅವರು ತಮ್ಮ ಬಾಲ್ಯದಲ್ಲಿ ರೂಪಿಸಿಕೊಂಡ ಸಂಸ್ಕಾರಭರಿತ ವ್ಯಕ್ತಿತ್ವವೇ ಕಾರಣ.

ವೀರನಾಯಕರು ಬಾಲ್ಯದಲ್ಲಿ ಸುತ್ತಾಡಿದ ಸ್ಥಳಗಳು ಅವರ ಮೇಲೆ ತೀವ್ರ ಪರಿಣಾಮ ಬೀರಿದವು. ಅವರು ಮುಂದೆ ಒಬ್ಬ ಪ್ರಬುದ್ಧ ಸಂಶೋಧಕರಾಗಲು ಇಂಥಾ ಪರಿಸರವೇ ಅವರಲ್ಲಿ ಸ್ಫೂರ್ತಿ ತುಂಬಿತು; ಅಧ್ಯಯನ ಶೀಲರಾಗಲು ಭದ್ರಬುನಾದಿ ಹಾಕಿತು. ವೀರನಾಯಕರು ತಮ್ಮ ಬಾಲ್ಯಕಾಲವನ್ನು ಕುರಿತು ಹೇಳಿರುವುದು ಹೀಗೆ : "ಮೇಲುದುರ್ಗದ ಗುಂಡುಬಂಡೆಗಳ ನೆರಳಿನಲ್ಲಿ ಕೂತು, ತಣ್ಣೀರುದೋಣೆಯ ನೀರು ಕುಡಿದು, ಅಲ್ಲಿನ ಕೋಟೆಕೊತ್ತಲುಗಳನ್ನು ನೋಡಿದ್ದ ದೃಶ್ಯಗಳು ಕಣ್ಣುಕಟ್ಟಿದಂತೆ ಬೇರೂರಿ ನಿಂತಿರಲು ಇತಿಹಾಸದ ಬಗೆಗೆ ನನಗಿದ್ದ ಆಸಕ್ತಿಯು ಮನೆಮಾಡಿಕೊಂಡಿತ್ತು. ನನ್ನ ಬಂಧುಗಳ ಮತ್ತು ಸ್ನೇಹಿತರ ಊರುಗಳಿಗೆ ಅಥವಾ ನನ್ನ ಸ್ವಂತ ಕಾರ್ಯನಿಮಿತ್ತ ಪರಸ್ಥಳಗಳಿಗೆ ಹೋದಾಗಲೆಲ್ಲ ಅಲ್ಲಿ ಏನಾದರೂ ಯಾವುದಾದರೂ ಇತಿಹಾಸಕ್ಕೆ ಸಂಬಂಧಪಟ್ಟ ವಿಷಯಗಳು ಸಿಕ್ಕಬಹುದೇನೋ ಎಂದು ಬೆದಕಿನೋಡುವ ಪರಿಪಾಠ ನನ್ನದಾಗಿತ್ತು."[೨]

ವೀರನಾಯಕರು ಆರಂಭದಲ್ಲಿ ಓದುಗರಿಗೆ ಪರಿಚಯವಾದದ್ದು ಪತ್ರಿಕೆಗಳಲ್ಲಿ ತಾವು ಬರೆಯುತ್ತಿದ್ದ ಪರಿಚಯಾತ್ಮಕ ಬಿಡಿಲೇಖನಗಳ ಮೂಲಕ. ಹಾಗೆಯೇ, ಮುಂದೊಮ್ಮೆ ಅವರು ಪ್ರತಿಷ್ಠಿತ ಇತಿಹಾಸ ಸಂಶೋಧಕರಾಗಲು ಇದು ಮೊದಲ ಮೆಟ್ಟಿಲಾಯಿತು. ಇದು ವೀರನಾಯಕರು ಹಂತಹಂತವಾಗಿ ಬೆಳೆದು ಜ್ಞಾನವನ್ನು ಸಂಪಾದಿಸುತ್ತಾ ಒಬ್ಬ ಸಂಶೋಧಕರಾಗಿ, ಇತಿಹಾಸಕಾರರಾಗಿ ರೂಪುಗೊಳ್ಳುತ್ತಾ ಬಂದುದನ್ನು ಸೂಚಿಸುತ್ತದೆ. ಇದರ ಹಿನ್ನೆಲೆಯಲ್ಲಿ ಪ್ರಭಾವಿಸುತ್ತಿದ್ದುದು ಅವರಲ್ಲಿ ಮನೆಮಾಡಿದ್ದ ಆಸಕ್ತಿ ಹಾಗೂ ಪರಿಶ್ರಮಗಳು ಮಾತ್ರ.

ವೀರನಾಯಕರು ಬಹುಹಿಂದಿನಿಂದಲೇ ಇತಿಹಾಸದಲ್ಲಿ ಪ್ರಮುಖ ಪಾತ್ರವಹಿಸಿದ ತಮ್ಮ ಪೂರ್ವಿಕರ ಬಗೆಗೆ ಹಾಗೂ ತಮ್ಮ ಜನಾಂಗದ ಮೂಲಪುರುಷ ವಾಲ್ಮೀಕಿ ಮಹರ್ಷಿಯ ಬಗೆಗೆ ವ್ಯಾಪಕವಾಗಿ, ಆಳವಾಗಿ ಹಾಗೂ ವಿಚಾರಪೂರ್ಣವಾಗಿ ಬರೆಯುವುದನ್ನು ರೂಢಿಸಿಕೊಂಡಿದ್ದುದು ಸ್ಪಷ್ಟಪಡುತ್ತದೆ. ಈ ಪ್ರಯತ್ನವು ಆ ನಂತರ ಅವರ ಜೀವನದಲ್ಲಿ ನೀಡಿದ ತಿರುವು ಗಮನೀಯವಾದುದು. ವೀರನಾಯಕರ ಸಂಶೋಧನ ಪ್ರವೃತ್ತಿ ಪ್ರವರ್ಧಿಸಲು ಇದ್ದ ಕಾರಣಗಳು ಹಲವಾರು. ಅವರು ಮೂಲತಃ ಹರ್ತಿಕೋಟೆಯಲ್ಲಿ ಆಳ್ವಿಕೆ ಮಾಡುತ್ತಾ ಬಂದ ಬೇಡ ನಾಯಕರ ಪೀಳಿಗೆಯವರಾಗಿದ್ದುದು ಒಂದು ಕಾರಣವಾದರೆ, ಅವರು ಸಂಶೋಧನೆ ಕೈಗೊಳ್ಳಲು ನಾಯಕ ಮನೆತನದ ಕಾಗದಪತ್ರಗಳು, ದಾಖಲೆಗಳು ಇನ್ನಿತರ ಅವಶ್ಯಕ ಮೂಲಾಧಾರಗಳು ಸುಲಭವಾಗಿ ಅವರ ಕೈಸೇರಿದುದು ಇನ್ನೊಂದು ಕಾರಣ. ಅಲ್ಲದೆ ತಮ್ಮ ಗ್ರಾಮದ ಆಸುಪಾಸಿನಲ್ಲಿ ಪ್ರಚಾರದಲ್ಲಿದ್ದ ಜನಪದಕಥೆಗಳು, ಜನಪದಕಾವ್ಯಗಳು, ಚಾರಿತ್ರಿಕ ವಿಚಾರಗಳು, ಇತರ ಮೌಖಿಕ ಆಧಾರಗಳು ವೀರನಾಯಕರನ್ನು ಸಂಶೋಧನಮಾರ್ಗದಲ್ಲಿ ಸಮರ್ಥವಾಗಿ ಹಾಗೂ ಅಧಿಕೃತವಾಗಿ ಮುಂದುವರೆಯಲು ಪ್ರಚೋದಿಸಿದವು.

ವೀರನಾಯಕರು ಹರ್ತಿಕೋಟೆಯ ಬಗ್ಗೆ ವಿಪುಲ ಮಾಹಿತಿ ಸಂಗ್ರಹಿಸಿದರು; ದಾಖಲೆಗಳನ್ನು ಅಧ್ಯಯನಿಸಿ ಖಚಿತ ಜ್ಞಾನವನ್ನು ಸಂಪಾದಿಸಿದರು. ಹರ್ತಿಕೋಟೆಗೆ ಯಾರಾದರೂ ಮಾಹಿತಿ ಸಂಗ್ರಹಣೆಗೆಂದು, ವೀಕ್ಷಣೆಗೆಂದು ಬಂದಾಗಲೆಲ್ಲ ಅವರು ಅವಶ್ಯವಾಗಿ ಭೇಟಿ ಮಾಡುತ್ತಿದ್ದುದು ವೀರನಾಯಕರನ್ನೇ. ಹರ್ತಿಕೋಟೆ ಇತಿಹಾಸ

ಕುರಿತು ವೀರನಾಯಕರಿಗಿದ್ದ ಖಚಿತ ತಿಳುವಳಿಕೆಯನ್ನು ಎಂ.ವಿ.ಚಿತ್ರಲಿಂಗಯ್ಯನವರು ಉದಾಹರಣೆಯೊಂದರ ಮೂಲಕ ದೃಢೀಕರಿಸಿದ್ದಾರೆ. ಹರ್ತಿಕೋಟೆಯಲ್ಲೊಂದು ಇತಿಹಾಸಕಾಲದ ಸಮಾಧಿಯಿದ್ದು, ಆ ಸಮಾಧಿಯನ್ನು ಊರ ಜನರೆಲ್ಲರೂ ಕರೆಯುತ್ತಿದ್ದುದು 'ಹರ್ತೀಶನಾಯಕನ ಸಮಾಧಿ' ಎಂದು. ವೀರನಾಯಕರು ಆ ಸಮಾಧಿ ಕುರಿತು ಸಂಶೋಧನೆ ನಡೆಸಿ ಅದನ್ನು ಪದ್ದ(ದ್ಮ)ಣ್ಣನಾಯಕನ ಸಮಾಧಿ ಎಂದು ಸಾಬೀತುಪಡಿಸಿದರು.

ವೀರನಾಯಕರು ಸುಸಂಸ್ಕೃತ ವ್ಯಕ್ತಿಯೆನಿಸುವಲ್ಲಿ ಹರ್ತಿಕೋಟೆಯ ಮೂಲ ಸಾಂಸ್ಕೃತಿಕ ಪರಿಸರವೂ ಕಾರಣ. ಹರ್ತಿಕೋಟೆಯು ಒಂದು ಕಾಲದಲ್ಲಿ ನಾಯಕ ದೊರೆಗಳ ರಾಜಧಾನಿಯಾಗಿದ್ದಂಥದು. ಐಮಂಗಲ, ದೊಡ್ಡೇರಿ, ನಿಡುಗಲ್ಲು, ರತ್ನಗಿರಿಗಳನ್ನು ಇದು ತನ್ನ ಉಪಕೇಂದ್ರಗಳನ್ನಾಗಿ ಮಾಡಿಕೊಂಡಿತ್ತು. ಇಂದು ಹರ್ತಿಕೋಟೆಯಲ್ಲಿ ಅಮೂಲ್ಯ ಐತಿಹಾಸಿಕ ಸ್ಮಾರಕಗಳು, ಹಳೆಯ ಕಟ್ಟಡಗಳು ಕಾಣಸಿಗುತ್ತವೆ. ಇವುಗಳ ನೋಟ ಹಾಗೂ ಸ್ಮರಣೆಗಳೇ ಪ್ರತಿಯೊಬ್ಬರಲ್ಲೂ ಶೈಕ್ಷಣಿಕನೆಲೆಯ ವಿಚಾರಗಳನ್ನು ಮೂಡಿಸುವಲ್ಲಿ ಸಫಲವಾಗುತ್ತವೆ. ಸಾಮಾನ್ಯ ಜನರಲ್ಲೂ ಇತಿಹಾಸದ ಬಗೆಗಿನ ಒಂದು ಹಂತದ ತಿಳುವಳಿಕೆ ಮೂಡಿಸಲು ಸಹಕಾರಿಯಾಗಿವೆ. ವೀರನಾಯಕರು ತಮ್ಮ ಬಾಲ್ಯದಲ್ಲೆ ಈ ಸ್ಮಾರಕಗಳ ಆಕರ್ಷಣೆಗೆ ಮನಸೋತುದು ಗಮನೀಯ ಅಂಶ.

ವೀರನಾಯಕರು ಸಾಹಿತ್ಯ, ಚರಿತ್ರೆ, ಕಾದಂಬರಿ, ನಾಟಕ ಪ್ರಕಾರಗಳಲ್ಲಿ ಗಮನಾರ್ಹವೆನಿಸುವ ಕೆಲಸ ಮಾಡಿದ್ದಾರೆ. ಇದನ್ನು ಗುರುತಿಸಿದ ಬಿ.ತಿಪ್ಪಣ್ಣ ಮರಿಕುಂಟೆಯವರು, "ಮುಂದೆ ಅನೇಕ ಬಾರಿ ನಾನು ವೀರನಾಯಕರೊಂದಿಗೆ ಕಲೆಯುತ್ತಿದ್ದೆ. ಆ ವೇಳೆಗೆ ಆ ವ್ಯಕ್ತಿ ನಮ್ಮ ನಿರೀಕ್ಷೆ ಮೀರಿ ಇತಿಹಾಸ, ಸಾಹಿತ್ಯದ ಬಗ್ಗೆ ಆಳವಾದ ಅಭ್ಯಾಸ ಮಾಡಿದ್ದರೆಂಬುದನ್ನೂ ಸಾಕಷ್ಟು ಬರವಣಿಗೆಯನ್ನು ರೂಢಿಸಿಕೊಂಡಿದ್ದರೆಂಬುದನ್ನೂ ತಿಳಿದುಕೊಂಡೆ"[೩] ಎಂದು ಬರೆದಿರುವರು.

ವೀರನಾಯಕರು ವಿವಿಧ ರಾಜ್ಯಗಳಲ್ಲಿ ಸುತ್ತಾಡಿದವರು. ಉಜ್ಜೈನಿ, ದೆಹಲಿ, ಕಾಶಿ ಪ್ರದೇಶಗಳನ್ನು ಸುತ್ತಿ ಅನೇಕ ಉಪಯುಕ್ತವಾದ ಮಾಹಿತಿ-ಪುರಾವೆಗಳನ್ನು ಶೋಧಿಸಿ ತೆಗೆದುಕೊಂಡು ಬಂದರು. ಇವು ಅವರ ಜೀವನದಲ್ಲಿ ದೊರೆತ ಅಮೂಲ್ಯ ಮೂಲಾಧಾರಗಳು. ಇವುಗಳನ್ನು ಸೂಕ್ತವಾಗಿ ಬಳಸಿಕೊಂಡು ಅವರು ಹರ್ತಿಕೋಟೆ, ಸಿರಾ, ಚಿತ್ರದುರ್ಗ, ರತ್ನಗಿರಿ ಮೊದಲಾದ ನಾಯಕರ ಬಗ್ಗೆ ವಿವರವಾಗಿ ಬರೆದರು.

ವೀರನಾಯಕರು ಹರ್ತಿಕೋಟೆಯಲ್ಲಿ ತಾವು ಸ್ಥಾಪಿಸಿದ್ದ 'ವಾಲ್ಮೀಕಿ ಸಾಹಿತ್ಯ ಸಂಪದ' ಸಂಸ್ಥೆಯನ್ನು ಬೆಳೆಸುವ ನಿಟ್ಟಿನಲ್ಲಿ ಕೆಲವಾರು ಯೋಜನೆಗಳನ್ನು ಹಮ್ಮಿಕೊಂಡರು. ಪತ್ರಿಕೋದ್ಯಮದಲ್ಲಿ ಸಾಧಿಸಲು ಉದ್ದೇಶಿಸಿದುದನ್ನು ವಾಲ್ಮೀಕಿ ಸಾಹಿತ್ಯ ಸಂಪದದ ಮೂಲಕ ಈಡೇರಿಸಿಕೊಳ್ಳಲು ಪ್ರಯತ್ನಿಸಿದರು. ನಂತರದ ದಿನಗಳಲ್ಲಿ ಇವರ ಬಯಕೆಗಳು ಫಲಿಸುವ ಸೂಚನೆಗಳು ಕಂಡುಬಂದವು. ಈ ಸಾಹಿತ್ಯ ಸಂಪದದ ಮುಖೇನ ವಾರ್ಷಿಕವಾಗಿ ಒಂದಾದರೂ ಚರಿತ್ರೆ ಅಥವಾ ಸಾಹಿತ್ಯ ಕುರಿತಾದ ಕೃತಿಯನ್ನು ಹೊರಡಿಸಬೇಕೆಂಬ ಅಪೇಕ್ಷೆ ಅವರದಾಗಿದ್ದಿತು. ಜೊತೆಗೆ ನಾಡಿನ ಮಹಾ ವಿದ್ವಾಂಸರನ್ನು, ಸಾಹಿತಿಗಳನ್ನು, ಕಲಾವಿದರನ್ನು, ಇತರೆ ಕ್ಷೇತ್ರ

ಗಳಲ್ಲಿ ಉತ್ತಮ ಸಾಧನೆ ಮಾಡಿದವರನ್ನು ಹರ್ತಿಕೋಟೆಗೆ ಆಹ್ವಾನಿಸಿ, ಸಂಪದದ ಮೂಲಕ ಸತ್ಕರಿಸುವುದೂ ಅವರ ಉದ್ದೇಶವಾಗಿತ್ತು. ಹೆಚ್ಚಿನ ಸಾಧನೆ ಮಾಡುವ ನಿಟ್ಟಿನಲ್ಲಿ ಸಾಹಿತಿ-ಸಂಶೋಧಕರನ್ನು ಪ್ರೇರೇಪಿಸಿ ಪ್ರೋತ್ಸಾಹಿಸಬೇಕು ಎಂಬುದು ಅವರ ಮುಖ್ಯ ಆಶಯವಾಗಿತ್ತು. ವಾಲ್ಮೀಕಿ ಸಾಹಿತ್ಯ ಸಂಪದವನ್ನು ಇನ್ನೂ ಹೆಚ್ಚಾಗಿ ಬೆಳೆಸಲೋಸುಗ ಅವರು ಸಾರ್ವಜನಿಕವಾಗಿ ಮನವಿಗಳನ್ನೂ ಪ್ರಕಟಣೆಗಳನ್ನೂ ಹೊರಡಿಸಿದರು. ಈ ಯೋಜನೆಗಳನ್ನು ಕಾರ್ಯಗತಗೊಳಿಸಲು ಕನಿಷ್ಠ ಐದುವರ್ಷಗಳಲ್ಲಿ ಒಂದುಲಕ್ಷ ರೂಪಾಯಿ ನಿಧಿಯನ್ನು ಅವರು ಕೂಡಿ ಹಾಕಬೇಕಾಗಿದ್ದಿತು. ವೀರನಾಯಕರು ತಮ್ಮ ಜೀವನದ ಕೊನೆಯವರೆವಿಗೂ ಇದರ ಏಳಿಗೆಯ ಬಗ್ಗೆಯೇ ಆಲೋಚಿಸುತ್ತಿದ್ದರು; ಹಾಗೂ ಅದಕ್ಕೆ ಅನುಗುಣವಾಗಿ ರೂಪ-ರೇಷೆಗಳನ್ನು ಸಿದ್ಧಪಡಿಸಿಕೊಳ್ಳುತ್ತಿದ್ದರು.

ವೀರನಾಯಕರಿಗೆ ನಾಯಕ ಜನಾಂಗದ ಮೇಲೆ ತುಂಬಾ ಅಭಿಮಾನವಿದ್ದಿತು. ತಮ್ಮ ಜನಾಂಗದ ಬಹುತೇಕ ಸಮ್ಮೇಳನಗಳಲ್ಲಿ ಅವರು ತಪ್ಪದೆ ಭಾಗವಹಿಸುತ್ತಿದ್ದರು. ಇತರೆ ಜನಾಂಗದವರೊಡನೆ ಉತ್ತಮ ಬಾಂಧವ್ಯ ಏರ್ಪಡಿಸುವುದು ಸಹಾ ಅಷ್ಟೇ ಮುಖ್ಯ ಎಂಬ ಅರಿವು ಅವರಲ್ಲಿ ಚೆನ್ನಾಗಿದ್ದಿತು. ಬಿ.ತಿಪ್ಪಣ್ಣ ಮರಿಕುಂಟೆಯವರು ವ್ಯಕ್ತಪಡಿಸಿರುವಂತೆ, "ಶ್ರೀಯುತರಿಗೆ ನಾಯಕ ಜನಾಂಗದ ಬಗ್ಗೆ ಹೆಚ್ಚಿನ ಅಭಿಮಾನವಿತ್ತು. ಜನಾಂಗದ ಯಾವುದೇ ಸಮಾಲೋಚನೆಗಳು ಅವರಿಲ್ಲದೆ ಪೂರ್ಣವಾಗುತ್ತಿರಲಿಲ್ಲ. ಜನಾಂಗದವರು ಎಲ್ಲರೊಂದಿಗೆ ಸಾಮರಸ್ಯದ ಬಾಳ್ವೆ ನಡೆಸಲು ನೆರವಾಗುವಂಥಾ ಮಾರ್ಗದರ್ಶನ ಅವರದು. ಅದಕ್ಕಾಗಿ ತಮ್ಮ ಪೂರ್ವಿಕರ ಬಗ್ಗೆ, ಶಕ್ತಿ ಸಾಮರ್ಥ್ಯದ ಬಗ್ಗೆ ನಾವು ತಿಳಿದುಕೊಳ್ಳಬೇಕು. ಅವರ ಒಳ್ಳೆಯ ಬಾಳಿನ ಕಿಂಚಿತ್ತನ್ನಾದರೂ ನಾವು ರೂಢಿಸಿಕೊಳ್ಳಬೇಕೆಂದು ಅವರು ಆಶಿಸುತ್ತಿದ್ದರು."[೪]

ಬೇಡಜನಾಂಗವನ್ನು ಇಂದಿನ ನಿಷ್ಕ್ರಿಯ ಸ್ಥಿತಿಯಿಂದ ಎಚ್ಚರಿಸಲು ಹಗಲಿರುಳು ದುಡಿದು, ಎಲ್ಲರನ್ನು ಒಂದುಗೂಡಿಸುವುದು ವೀರನಾಯಕರ ಮಹೋದ್ದೇಶಗಳಲ್ಲಿ ಒಂದಾಗಿದ್ದಿತು. ವಾಲ್ಮೀಕಿ ಸಮುದಾಯದ ಬೃಹತ್ತಾದ ಚರಿತ್ರೆಯನ್ನು ವಾಲ್ಮೀಕಿ ಸಮಾಜಕ್ಕೆ ಮನದಟ್ಟು ಮಾಡಿಕೊಡಬೇಕೆಂದು ವೀರನಾಯಕರು ತುಂಬಾ ಪರಿಶ್ರಮಪಟ್ಟರು. ಅಂದು ಆಂಗ್ಲರ ಆಡಳಿತ ಕಾಲದಲ್ಲಿ ತಲೆಮಾರಿನಿಂದ ತಲೆಮಾರಿಗೆ ಮರೆಮಾಚುತ್ತಿದ್ದ ವಾಲ್ಮೀಕಿ ಸಮಾಜದ ಇತಿಹಾಸವನ್ನು, ಪ್ರಾಮುಖ್ಯತೆಯನ್ನು ವೀರನಾಯಕರು ಆತ್ಮೀಯತೆ ಹಾಗೂ ತಮ್ಮ ಅಧ್ಯಯನಶೀಲ ಜ್ಞಾನದಿಂದ ಎತ್ತರಿಸಿ ಎಲ್ಲರೂ ನೋಡುವಂತೆ ಮಾಡಿದರು ಎಂದು ಪತ್ರಿಕೋದ್ಯಮಿ ಎಸ್.ಎಚ್.ಕೋಲಕಾರ ಹೇಳಿರುವುದು ಇದೇ ಹಿನ್ನೆಲೆಯಲ್ಲಿ. "ಕತ್ತಲೆಯಲ್ಲಿ ಹುದಗಿ ಹೋಗುತ್ತಿದ್ದ ವಸ್ತುಗಳ ಮೇಲೆ ಭಗವಾನ್ ಭಾಸ್ಕರನು ತನ್ನ ಪ್ರಕಾಶವನ್ನು ಬೀರಿ ಎಲ್ಲರ ಕಣ್ಣಿಗೆ ಬೀಳುವಂತೆ ಮಾಡುವ ರೀತಿಯಲ್ಲಿ ಹೆಚ್.ವಿ.ವೀರನಾಯಕರು ಬ್ರಿಟಿಷ್ ಸರಕಾರದ ಆಳ್ವಿಕೆಯಲ್ಲಿ ಪೀಳಿಗೆಯಿಂದ ಪೀಳಿಗೆಗೆ ಕಣ್ಮರೆಯಾಗಿ ಬಿಡುತ್ತಿದ್ದ ಬೇಡನಾಯಕರ ಚರಿತ್ರೆಯನ್ನೂ ದಾಖಲೆಯನ್ನೂ ಮಹತ್ವವನ್ನೂ ತಮ್ಮ ಅಭಿಮಾನ ಹಾಗೂ ವಿದ್ಯೆಯ ಶ್ರಮದ ಬೆಳಕಿನಿಂದ ಬೆಳಗಿಸಿ ಎಲ್ಲರ ಕಣ್ಣಿಗೆ ಕಾಣುವಂತೆ ಎತ್ತಿಹಿಡಿದರು. ಹೀಗೆ ಪೂಜ್ಯರಾದ ವೀರನಾಯಕರು 'ನಾಯಕವಂಶ ಭಾಸ್ಕರ'ರಾಗಿ ನಮ್ಮನ್ನು ಉಪಕೃತರನ್ನಾಗಿ ಮಾಡಿ ಅಮರರಾಗಿದ್ದಾರೆ. ಅವರ ವ್ಯಕ್ತಿತ್ವಕ್ಕೆ ನಮೋನ್ನಮಃ!"[೫] ಎಂದಿರುವವರು ಸಂಶೋಧಕ ಎಂ.ವಿ.ಚಿತ್ರಲಿಂಗಯ್ಯ.

ವೀರನಾಯಕರು ನಾಯಕಜನಾಂಗದ ಸಭೆ-ಸಮ್ಮೇಳಗಳಲ್ಲಿ ಅಭಿಮಾನಪೂರ್ವಕ ಭಾಗವಹಿಸುತ್ತಿದ್ದರು. ಅವರು ನಾಯಕಜನಾಂಗವನ್ನು ಯೋಧಜನಾಂಗವೆಂದು ಗುರುತಿಸಿದ್ದಾರೆ. ಅವರಿಗೆ ನಾಯಕಜನಾಂಗದ ಬಗೆಗೆ ಅಪಾರ ಅಭಿಮಾನ. ಇದು ಪ್ರಜ್ಞಾವಂತ ವ್ಯಕ್ತಿಯಲ್ಲಿರಬೇಕಾದ ಗುಣವೇ ಆಗಿದೆ. ಎಲ್ಲ ಕ್ಷೇತ್ರಗಳಲ್ಲೂ ಹಿಂದುಳಿದ ತಮ್ಮ ಜನಾಂಗವನ್ನು ಏಳಿಗೆಯ ಪಥದಲ್ಲಿ ತರುವುದು ಆಯಾ ಜನಾಂಗದ ಪ್ರತಿಯೊಬ್ಬ ಪ್ರಜ್ಞಾವಂತ ವ್ಯಕ್ತಿಯ ಆದ್ಯ ಕರ್ತವ್ಯವಾಗುತ್ತದೆ. ಇದನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡ ಕೆಲವೇ ವ್ಯಕ್ತಿಗಳಲ್ಲಿ ವೀರನಾಯಕರೂ ಒಬ್ಬರೆಂಬುದು ಇಲ್ಲಿ ಮುಖ್ಯ. ಈ ಹಿನ್ನೆಲೆಯಲ್ಲಿಯೇ 'ಶ್ರೀ ಸದ್ಗುರು ನಿತ್ಯಾನಂದ ಪ್ರಸಾದಿತ' ರಂಗದಾಸ ಅವರು, "ಇತಿಹಾಸಜ್ಞರಾದ ಶ್ರೀಮಾನ್ ಹೆಚ್.ವಿ.ವೀರನಾಯಕ 'ಹರತಿ' ಇವರು ವಾಲ್ಮೀಕಿ ಜನಾಂಗದ ಪುರೋಭಿವೃದ್ಧಿಗಾಗಿಯೇ ಈ ಜನಾಂಗದಲ್ಲಿ ಜನ್ಮಕ್ಕೆ ಬಂದಿರುವರೆಂಬ ಸಂತೋಷವು ನನಗಾಗುತ್ತಿದೆ"[೧] ಎಂದಿರುವರು.

ತಮ್ಮ ಬೇಡಜನಾಂಗವನ್ನು ಎಂದಿನ ಪೌರುಷದ ಹಾದಿಯಲ್ಲಿ ಮುನ್ನಡೆಸುವ ಉದ್ದೇಶದಿಂದ ವೀರನಾಯಕರು ರೋಚಕವಾಗಿ ಬರೆಯಲುಪಕ್ರಮಿಸಿದರು. ಹಿಂದಿನ ನಾಯಕ ಜನಾಂಗದ ಶೌರ್ಯ, ಧೈರ್ಯ, ಪೌರುಷದ ಬಗ್ಗೆ ಅವರು ವರ್ಣಿಸಿದುದು ಹೀಗೆ : "ಬರಸಿಡಿಲಿನಂತೆರಗಿ ವೈರಿಯ ಬಾಯಿಯಲ್ಲಿ ತಮ್ಮ ತಮ್ಮ ಖಡ್ಗಗಳನಿಟ್ಟು ಸುರ್ರೆಂದು ನೀರನ್ನು ತಣಿಸಿ ಅವರ ಮಸ್ತಕದ ಮೇಲೆ ಖಡ್ಗವನ್ನು ಮಸೆದು ಅವರ ವದನವನ್ನೇ ಖಡ್ಗದ ಒರೆಯನ್ನಾಗಿ ಮಾಡಿದರು. ಶತೃಗಳ ತಲೆಗಳನ್ನು ಕೊಡಗಳನ್ನಾಗಿ ಮಾಡಿ ಅವರ ಸೇನಾ ಸಮೂಹವೆಂಬ ಗಾಲಿಯ ಮೂಲಕ ಯುದ್ಧರಂಗವೆಂಬ ಬಾವಿಯಿಂದ ತಮ್ಮ ವಂಶದ ಕೀರ್ತಿಲತೆಗೆ ರಕ್ತದ ನೀರನ್ನು ಯಾತ ಹೊಡೆದರು!"[೨]

ವೀರನಾಯಕರೊಬ್ಬ ಪರೋಪಕಾರಿ. ಕಷ್ಟಗಳಲ್ಲಿ ಸಿಲುಕಿ ಹಾಕಿಕೊಂಡಿದ್ದವರಿಗೆ ನೆರವಾಗುತ್ತಿದ್ದ ವ್ಯಕ್ತಿ. ಹರ್ತಿಕೋಟೆಯ ದೀನ-ದಲಿತರಿಗೆ ಜೀವನ ಸುಧಾರಿಸಲು ಸಾಧ್ಯವಾದ ಮಟ್ಟಿಗೆ ಪ್ರಯತ್ನಿಸಿದರು. ಇದಕ್ಕೋಸ್ಕರ ಅನೇಕ ಮಾರ್ಗೋಪಾಯಗಳನ್ನು ಹುಡುಕಿದರು. ಸ್ವಯಂವೃತ್ತಿಗಳನ್ನು ಜಾರಿಗೆ ತಂದರು. ಮಹಿಳೆಯರಿಗೆ ಹೊಲಿಗೆಯಂತ್ರದ ತರಬೇತಿ ಹಾಗೂ ಯುವಕರಿಗೆ ವಾದ್ಯ ನುಡಿಸುವ ತರಬೇತಿ ಇವು ಕೆಲವು ಉದಾಹರಣೆಗಳು.

ವೀರನಾಯಕರ ವ್ಯಕ್ತಿತ್ವದ ಇನ್ನೊಂದು ಮುಖವೆಂದರೆ ಅವರೊಬ್ಬ ಸ್ನೇಹಜೀವಿಗಳಾಗಿದ್ದರು. ಅವರಿಗೆ ನಾಡಿನ ಹಲವಾರು ಘನವಿದ್ವಾಂಸರ ಜೊತೆ ಆತ್ಮೀಯ ಗೆಳೆತನವಿತ್ತು. ಹುಲ್ಲೂರು ಶ್ರೀನಿವಾಸ ಜೋಯಿಸರು, ಬೆಳಗೆರೆ ಕೃಷ್ಣಶಾಸ್ತ್ರಿ, ಬರಗೂರು ರಾಮಚಂದ್ರಪ್ಪ, ಬಿ.ಎಲ್.ವೇಣು, ಹಂಪ ನಾಗರಾಜಯ್ಯ, ಲಕ್ಷ್ಮಣ್ ತೆಲಗಾವಿ ಇನ್ನೂ ಅನೇಕರು ಇವರಿಗೆ ಹತ್ತಿರದವರಾಗಿದ್ದರು. ಇವರೆಲ್ಲ ಅವರ ಪ್ರೀತಿ-ವಿಶ್ವಾಸಗಳಿಗೆ ಪಾತ್ರರಾಗಿ ಅವರ ಆತ್ಮೀಯತೆಯನ್ನು ಅನುಭವಿಸಿದಂಥವರು. ಇವರ ಸ್ನೇಹಿತರ ಗುಂಪು ಬಹಳ ವಿಸ್ತಾರವಾಗಿದ್ದಿತು. ಇದು ಹರ್ತಿಕೋಟೆಗೆ ಮಾತ್ರ ಸೀಮಿತವಾಗಿರದೆ ಆಸುಪಾಸಿನ ಹಳ್ಳಿಗಳಿಗೂ ಪಸರಿಸಿದ್ದಿತು. ಇವರ ಗೆಳೆತನವು ಜಾತಿ-ಭೇದ, ವಯಸ್ಸಿನ ತಾರತಮ್ಯಗಳನ್ನು ಮೀರಿದ್ದಿತು. ವೀರನಾಯಕರಲ್ಲಿದ್ದ ಬಹುಮುಖ

ಪ್ರತಿಭೆಯಿಂದಾಗಿ ಅನೇಕ ವಿದ್ವಾಂಸರು, ಕಲಾವಿದರು, ವಿವಿಧ ರಂಗಗಳಲ್ಲಿ ಸಾಧನೆಗೈದವರು ಅವರನ್ನು ಇಂದಿಗೂ ನೆನಪಿಸಿಕೊಳ್ಳುವಂತಾಗಿದ್ದಾರೆ. ಲಿಂಗ, ಜಾತಿ, ವಯಸ್ಸುಗಳ ತಾರತಮ್ಯವಿಲ್ಲದೆ ವೀರನಾಯಕರ ಬಗೆಗೆ ಎಲ್ಲರ ಅಭಿಪ್ರಾಯವೂ ಒಂದೇ ಆಗಿರುವುದು ಗಮನಾರ್ಹ.

ವೀರನಾಯಕರು ಒಬ್ಬ ದಕ್ಷವ್ಯಕ್ತಿಯಾಗಿದ್ದರು. ಇವರ ಈ ಗುಣವು ಕೇವಲ ಚಿತ್ರದುರ್ಗ ಜಿಲ್ಲೆಯ ಜನರ ಗಮನಕ್ಕೆ ಮಾತ್ರ ಬಂದಿರದೆ ನೆರೆಯ ಜಿಲ್ಲೆಗಳಿಗೆ ಪಸರಿಸಿದ್ದಿತು. ಒಮ್ಮೆ ವೀರನಾಯಕರ ಆಪ್ತರಾದ ಹೆಚ್.ವಿ.ವೀರಭದ್ರಯ್ಯನವರು ತುಮಕೂರು ಜಿಲ್ಲೆಯ ಬುವನಹಳ್ಳಿಗೆ ಹೋಗಿದ್ದರು. ಪ್ರಾಸಂಗಿಕವಾಗಿ ವೀರನಾಯಕರನ್ನು ಕುರಿತು ಹಿರಿಯರೊಬ್ಬರ ಜೊತೆ ಪ್ರಸ್ತಾಪಿಸಿದಾಗ, ಅದಕ್ಕೆ ಆ ಹಿರಿಯರು "ಅವರು ತುಂಬಾ ದಕ್ಷರು ಸ್ವಾಮಿ, ಒಳ್ಳೆಯ ಅಧಿಕಾರಿಗಳು. ಗ್ರಾಮದ ತಾಯಿಯಂತಿದ್ದರು"[೮]ಎಂದರಂತೆ.

ವೀರನಾಯಕರು ಮೊದಲಿನಿಂದಲೂ ಗ್ರಾಮಮುಖಂಡರಾಗಿ ಬೆಳೆದವರು. ಇದು ಅಷ್ಟೊಂದು ಸುಲಭದ ಕೆಲಸವಲ್ಲ. ಗ್ರಾಮವೆಂದರೆ ಅನೇಕ ಅಡೆತಡೆಗಳು, ಸಮಸ್ಯೆಗಳು ಎದುರಾಗುವ ವ್ಯವಸ್ಥೆ. ಗ್ರಾಮಜೀವನದಲ್ಲಿ ಸಮಸ್ಯೆಯೆನ್ನುವುದು ಇಬ್ಬದಿಯ ಖಡ್ಗವಿದ್ದಂತೆ. ವೀರನಾಯಕರು ಗ್ರಾಮದ ಮುಖಂಡರಾಗಿ ಅದನ್ನು ತಮ್ಮ ಗಟ್ಟಿತನದಿಂದ ನಿಭಾಯಿಸಿದರು. ಏಕೆಂದರೆ ಅವರಲ್ಲಿ ಉತ್ತಮ ನಾಯಕನಲ್ಲಿರಬೇಕಾದ ಗುಣಗಳು ವಿಪುಲವಾಗಿದ್ದವು. ಅವರ ಸಮಕಾಲೀನರು ಗುರುತಿಸುವಂತೆ, ವೀರನಾಯಕರಿಗೆ ಬೆಟ್ಟದಷ್ಟು ತಾಳ್ಮೆ-ಸಹನೆ ಇದ್ದಿತು, ಸಾಗರದಷ್ಟು ಧೈರ್ಯವಿದ್ದಿತು. ನೂರು ಅಸಂಬದ್ಧ ನಾಲಿಗೆಗಳಿಗೆ ಮಿಡುಕದ, ಕುಗ್ಗದ ಅಚಲತೆಗಳು ಅವರಲ್ಲಿ ಮನೆಮಾಡಿದ್ದವು! ಏಕೆಂದರೆ ವೀರನಾಯಕರು ತಮ್ಮ ಧ್ಯೇಯ-ಧೋರಣೆಗಳನ್ನು ದಿಟ್ಟತನದಿಂದ ಸಾಧಿಸುವವರಾಗಿದ್ದರು. ತಮ್ಮ ಯೋಜನೆಗಳನ್ನು ಕಾರ್ಯಗತಗೊಳಿಸುವಲ್ಲಿ ಎಷ್ಟೇ ಶ್ರಮವಾದರೂ ಎಂಥಾ ಸಮಸ್ಯೆಗಳು ಎದುರಾದರೂ ಅವುಗಳನ್ನು ಸುಲಭದಲ್ಲಿ ಕೈಬಿಡುವ ವ್ಯಕ್ತಿಯಾಗಿರಲಿಲ್ಲ ವೀರನಾಯಕರು. ಅವುಗಳನ್ನು ದಿಟ್ಟತನದಿಂದ ಸಾಧಿಸುವ ಗಟ್ಟಿವ್ಯಕ್ತಿಯಾಗಿದ್ದರು ಅವರು.

ವೀರನಾಯಕರ ಆತಿಥ್ಯ-ಔದರ್ಯಗಳನ್ನು ಕುರಿತು ಹೇಳುವುದಾದರೆ, ಅವರೊಬ್ಬ ಕಟ್ಟಾ ಭಾರತೀಯರಾಗಿದ್ದು ಸುಸಂಸ್ಕೃತ ಆಚಾರ-ವಿಚಾರಗಳನ್ನು ಮೈಗೂಡಿಸಿಕೊಂಡ ವ್ಯಕ್ತಿಯಾಗಿದ್ದರು. ತಮ್ಮ ಗ್ರಾಮಕ್ಕೆ ಯಾರಾದರೂ ದೊಡ್ಡ ವ್ಯಕ್ತಿಗಳು ಬಂದರೆ, ಅವರಿಗೆ ಆದರದ ಸತ್ಕಾರ ನೀಡುತ್ತಿದ್ದರು. ಅಂಥವರನ್ನು ತಮ್ಮ ಮನೆಗೆ ಕರೆದೊಯ್ದು ಸ್ವಾದಭರಿತ ಔತಣಕೂಟವನ್ನು ಏರ್ಪಡಿಸುತ್ತಿದ್ದರು. ಇದು ಅವರ ಉತ್ತಮ ವ್ಯಕ್ತಿತ್ವದ ಸಂಕೇತವೆನ್ನಬಹುದು. ಈ ವಿಷಯವಾಗಿ ಕುಟ್ಟೀಜಿಯವರು ಬೆಳಗೆರೆ ಕೃಷ್ಣಶಾಸ್ತ್ರಿಗಳಿಗೆ ಹೇಳಿದ ಮಾತೆಂದರೆ, "ನಮ್ಮ ಭಾರತೀಯ ಸಂಸ್ಕೃತಿಯ ಅರಿವಿದ್ದವರಿಗೆ ಮಾತ್ರ ಇದು ಸಾಧ್ಯ."[೯]

ವೀರನಾಯಕರು ನಾಯಕ ಜನಾಂಗವನ್ನು, ಪಂಚಮರನ್ನು, ಕುರುಬರನ್ನು ಮೊದಲಾದ ಜಾತಿಗಳನ್ನು ಒಂದೇ ವೇದಿಕೆಯ ಮೇಲೆ ಕಾಣುವಂತೆ ಮಾಡಲು ಹೆಣಗಾಡಿದವರು. ಇದನ್ನು ಅವರು ಪ್ರಥಮತಃ ಹರ್ತಿಕೋಟೆಯಲ್ಲಿ ಪ್ರಯೋಗಿಸಿ ಸಫಲರಾದರು. ಅಸ್ಪೃಶ್ಯ ಜನಾಂಗದವರನ್ನು ತಮ್ಮ ಮನೆಯೊಳಗೆ ಬರಲು

ಅವಕಾಶ ಮಾಡಿಕೊಟ್ಟು ಇತರ ಜನಾಂಗಗಳವರಿಗೆ ಮಾದರಿಯಾದರು. "ಪಂಚಮರನ್ನು ಹೊಸಿಲಿನೊಳಗೆ ಮೊದಲು ಬಿಟ್ಟುಕೊಂಡ ಒಂದೇ ಕಾರಣಕ್ಕೆ ನಾನು ವೀರನಾಯಕರನ್ನು ಗೌರವಿಸಿದ್ದು" [೧೦]ಎಂದು ಹೇಳಿದವರು ಹರ್ತಿಕೋಟೆಮೂಲದ ನ್ಯಾಯವಾದಿ ಹೆಚ್.ದಯಾನಂದ. ವೀರನಾಯಕರದು ಕೊಡುಗೈ ವ್ಯಕ್ತಿತ್ವ. ಅವರು ತಮ್ಮ ಗ್ರಾಮಕ್ಕೆ ಬೆಟ್ಟದಷ್ಟು ಸೇವೆ ಮಾಡಿದರು. ಪ್ರತಿಯಾಗಿ ತಮ್ಮ ಗ್ರಾಮದವರಿಂದ ಏನನ್ನೂ ನಿರೀಕ್ಷಿಸಲಿಲ್ಲ.

ವೀರನಾಯಕರು ಹೃದಯ ತೊಂದರೆಯಿಂದಾಗಿ ೨೬ ಮಾರ್ಚ್, ೧೯೮೩ ರಂದು ಚಿತ್ರದುರ್ಗದ ತಮ್ಮ ನೆಚ್ಚಿನ ವೈಶಾಲಿ ನರ್ಸಿಂಗ್ ಹೋಂನಲ್ಲಿಯೇ ಕೊನೆಯುಸಿರೆಳೆದರು. ವೈದ್ಯರಾದ ಡಾ.ಡಿ.ರಾಮಚಂದ್ರ ನಾಯ್ಕರು ವೀರನಾಯಕರ ಪಾರ್ಥಿವ ಶರೀರವನ್ನು ಸಕಲ ಗೌರವಗಳಿಂದ ಹರ್ತಿಕೋಟೆಗೆ ಕಳುಹಿಸಿಕೊಟ್ಟರು. ಇವರ ಅಂತ್ಯಕ್ರಿಯೆ ಹರ್ತಿಕೋಟೆಯಲ್ಲಿ ನಡೆಯಿತು.

❑❑

**ಟಿಪ್ಪಣಿಗಳು**

೧. **ವಾಲ್ಮೀಕಿ ಸಂದೇಶ,** ಮಾರ್ಚ್ ೧೯೮೪, ಪು.೧೭

೨. ಅದೇ, ಪು.೧೨೮೩

೩. ಅದೇ, ಪು.೧೭

೪. ಅದೇ, ಪು.೧೮

೫. ಅದೇ, ಪು.೨೪

೬. ಹರತಿಸಿರಿ, ಪು.೧೨೮೪

೭. ಅದೇ, ಪು.೧೨೫

೮. ಅದೇ, ಪು.೧೨೦೮

೯. ಅದೇ, ಪು.೧೨೦೧

೧೦. **ವಾಲ್ಮೀಕಿ ಸಂದೇಶ,** ಮಾರ್ಚ್ ೧೯೮೪, ಪು.೧೯

೩

## ವೀರನಾಯಕರ ಬರವಣಿಗೆಗಳು

ವೀರನಾಯಕರ ತಂದೆಯವರು ವೃತ್ತಿಯಿಂದ ಶಿಕ್ಷಕರಾಗಿದ್ದುದರಿಂದ ಕುಟುಂಬದಲ್ಲಿ ಶೈಕ್ಷಣಿಕ ವಾತಾವರಣವಿದ್ದುದು ಸಹಜ. ಇದು ಬಾಲಕ ವೀರನಾಯಕರ ಮೇಲೆ ಅಪಾರ ಪ್ರಭಾವ ಬೀರಿತು. ಮುಂದೆ ಅವರು ಬರಹಗಾರರೆನಿಸಲು ಸಹಕಾರಿಯಾಯಿತು. ವೀರನಾಯಕರು ತಮ್ಮ ಬರಹಗಳಲ್ಲಿ ಚಿತ್ರದುರ್ಗ ಸಂಸ್ಥಾನವನ್ನು ಮುಖ್ಯವಸ್ತುವಾಗಿ ಆಯ್ಕೆ ಮಾಡಿಕೊಂಡಿದ್ದಾರೆ. ಇವರು ರಚಿಸಿದ ಚರಿತ್ರೆ, ಸಾಹಿತ್ಯ, ನಾಟಕಗಳಾದರೂ ಹೆಚ್ಚಾಗಿ ನಾಯಕ ಜನಾಂಗಕ್ಕೆ ಸಂಬಂಧಿಸಿದುವು. ವೀರನಾಯಕರದು ಸಂಪ್ರದಾಯಬದ್ಧವಾದ ಶೈಲಿ. ಮೊದಮೊದಲು ಐತಿಹಾಸಿಕ ವಿಷಯಗಳುಳ್ಳ ಮತ್ತು ವೈಚಾರಿಕತೆಯ ಲೇಖನಗಳನ್ನು ಬರೆದರು. ಆ ನಂತರ ಅವರ ಆಸಕ್ತಿಯು ಸೃಜನಶೀಲಸಾಹಿತ್ಯ ರಚನೆಯತ್ತ ಹೊರಳಿತು. ಅವರ ಲೇಖನಗಳು ೧೯೪೬-೪೭ರಲ್ಲಿ 'ಪ್ರಜಾಮತ' ವಾರಪತ್ರಿಕೆಯಲ್ಲಿ ಪ್ರಕಟಗೊಳ್ಳಲಾರಂಭಿಸಿದವು.

ವೀರನಾಯಕರು ಇತರ ಹಲವಾರು ಪತ್ರಿಕೆಗಳಿಗೂ ಲೇಖನಗಳನ್ನು ಬರೆದಿದ್ದಾರೆ. ಪ್ರಸಿದ್ಧ ಇತಿಹಾಸ ಸಂಶೋಧಕ ಎಂ.ವಿ.ಚಿತ್ರಲಿಂಗಯ್ಯನವರು ಪ್ರೌಢಶಾಲೆಯಲ್ಲಿ ಓದುವಾಗಲೇ ಆಗ ವಾರಪತ್ರಿಕೆಗಳಲ್ಲಿ ಪ್ರಕಟಗೊಳ್ಳುತ್ತಿದ್ದ ವೀರನಾಯಕರ ಲೇಖನಗಳನ್ನು ಓದಿ ಪುಳಕಗೊಳ್ಳುತ್ತಿದ್ದರಂತೆ. ಇವರ ಲೇಖನಗಳನ್ನು ಓದುತ್ತಿದ್ದ ನಾಯಕಜನಾಂಗದವರಲ್ಲಿ ವಿದ್ಯುತ್ ಪ್ರವಾಹವನ್ನು ಹರಿಸಿದಂಥಾ ಅನುಭಾವವಾಗುತ್ತಿದ್ದಿತೆಂದು ಅಭಿಪ್ರಾಯಿಸಿದ್ದಾರೆ. ಇತರ ಐತಿಹಾಸಿಕ ವಿಷಯಗಳಿಗೂ ವೀರನಾಯಕರು ಆದ್ಯತೆ ನೀಡುತ್ತಿದ್ದರು. ಉದಾಹರಣೆಗೆ 'ಇತಿಹಾಸಪ್ರಸಿದ್ಧ ದಕ್ಷಿಣಕಾಶಿ ಎಂಬ ನಾಮಾಂಕಿತ ಹಿರಿಯೂರು ತೇರುಮಲ್ಲೇಶ್ವರ' ಎಂಬ ಇವರ ಲೇಖನವು 'ನಾಯಕಮಣಿ' ವಾರಪತ್ರಿಕೆಯಲ್ಲಿ ೧೯೮೨ರಲ್ಲಿ ಎರಡು ಕಂತುಗಳಲ್ಲಿ ಪ್ರಕಟಗೊಂಡಿತು.

ವೀರನಾಯಕರು ಮುಖ್ಯವಾಗಿ ಚಿತ್ರದುರ್ಗ ಮತ್ತು ನೆರೆಯ ಜಿಲ್ಲೆಗಳ ಕೆಲವು ತಾಲ್ಲೂಕುಗಳನ್ನು ತಮ್ಮ ಸಂಶೋಧನ ಕಾರ್ಯಕ್ಷೇತ್ರವಾಗಿ ಗುರುತಿಸಿಕೊಂಡುದನ್ನು ನೋಡಬಹುದು. ಪ್ರಾದೇಶಿಕ ಇತಿಹಾಸ ಅಧ್ಯಯನ ಕ್ಷೇತ್ರದಲ್ಲಿ ಈ ಬಗೆಯ ಮಿತಿಗೊಳಪಡುವುದು ಅನಿವಾರ್ಯ. ಚಿತ್ರದುರ್ಗ ಇತಿಹಾಸ ಅಧ್ಯಯನದ ಮಟ್ಟಿಗೆ, ಪ್ರಸಿದ್ಧ ವಿದ್ವಾಂಸರಾದ ಹುಲ್ಲೂರು ಶ್ರೀನಿವಾಸ ಜೋಯಿಸರು, ತ.ರಾ.ಸು, ಗಳಗನಾಥ, ಬಿ.ಎಲ್.ವೇಣು, ಟಿ.ಗಿರಿಜ ಮೊದಲಾದವರು ಪಡೆದುಕೊಂಡ ಉತ್ತಮ ಫಲಿತಾಂಶ ಮತ್ತು ಪ್ರಸಿದ್ಧಿಗಳು ವೀರನಾಯಕರನ್ನು ಪ್ರೇರೇಪಿಸಿರಬಹುದು. ಚಿತ್ರದುರ್ಗವನ್ನಾಳಿದ ನಾಯಕವರ್ಗದವರ ಶಕ್ತಿ-ಯುಕ್ತಿ-ಸಾಮರ್ಥ್ಯಗಳನ್ನು ಕುರಿತ ಮೈ ನವಿರೇಳಿಸುವಂಥಾ ಅನೇಕ ಘಟನೆಗಳೂ ಅವರನ್ನು ಆಕರ್ಷಿಸಿರಬೇಕು. ಅಲ್ಲದೆ, ನಾಯಕ ಮನೆತನ

ಆಡಳಿತ, ವಂಶಾವಳಿ ಮೊದಲಾದವು ಕೃತಿ ರಚಿಸಲು ವೀರನಾಯಕರಿಗೆ ಪ್ರೋತ್ಸಾಹಿಸಿರಬಹುದು. ಅಲ್ಲದೆ, ವಿಪುಲವಾಗಿ ಲಭ್ಯವಿರುವ ಕಾಗದ-ಪತ್ರ, ದಾಖಲೆ ಮೊದಲಾದ ಮೂಲಆಕರಗಳು ಅವರನ್ನು ಸೆಳೆದುಕೊಂಡಿರುವ ಸಾಧ್ಯತೆಯೂ ಉಂಟು. ಈ ಭಾಗದ ಇತಿಹಾಸಕ್ಕೆ ಸಂಬಂಧಿಸಿದ ನೂತನ ವಿಚಾರಗಳು ಪ್ರತಿನಿತ್ಯವೆಂಬಂತೆ ಬೆಳಕಿಗೆ ಬರುತ್ತಲೇ ಇರುತ್ತಿದ್ದವು. ವೀರನಾಯಕರೂ ನಾಯಕ ಜನಾಂಗಕ್ಕೆ ಸೇರಿದವರಾದ್ದರಿಂದ ಅವರಿಗೂ ಕೆಲವು ದಾಖಲೆಗಳು ಸುಲಭವಾಗಿ ಕೈಸೇರಿದವು. ಜನಾಂಗಾಭಿಮಾನವು ಅವರಲ್ಲಿ ಸಾಕಷ್ಟು ಕೆಲಸ ಮಾಡುತ್ತಿದ್ದುದರಿಂದ, ವೀರನಾಯಕರು ಸಂಶೋಧನೆ, ಸಾಹಿತ್ಯಕೃತಿ ರಚನೆ ಇತ್ಯಾದಿಯನ್ನು ಕೈಗೆತ್ತಿಕೊಳ್ಳಲು ನಿರ್ಧರಿಸಿದುದು ಸಹಜ.

ವೀರನಾಯಕರಿಂದ ರಚಿಸಲ್ಪಟ್ಟ ಚಾರಿತ್ರಿಕ, ಸಾಹಿತ್ಯಿಕ ಕೃತಿಗಳು ಹಲವಾರು. ಅವುಗಳ ಪೈಕಿ 'ದುರ್ಗದ ಧವಳಕೀರ್ತಿ' ಎಂಬುದು ೧೯೮೧ರಲ್ಲಿ ಪ್ರಕಟವಾಯಿತು. ಆ ನಂತರ 'ಕಣ್ಮರೆಯಾದ ಕನ್ನಡದ ಕಲಿನಾಡು' ರಚನೆಯು ಗದುಗಿನಿಂದ ಪ್ರಕಟಗೊಳ್ಳುತ್ತಿದ್ದ 'ವಾಲ್ಮೀಕಿ ಸಂದೇಶ' ಮಾಸಪತ್ರಿಕೆಯಲ್ಲಿ ೧೯೮೩ ರಿಂದ ೮೫ ರವರೆಗೆ ಪ್ರಕಟಗೊಂಡಿತು. ಆ ನಂತರ ಬಂದುದು 'ಬಲೆಯಲ್ಲಿ ದುರ್ಗದ ಹುಲಿ.' ಈ ಕಾದಂಬರಿಯು 'ದುರ್ಗದ ಧವಳಕೀರ್ತಿ'ಯ ಎರಡನೇ ಭಾಗ. ಇದು ಸಹಾ ಗದುಗಿನಲ್ಲಿ ಪ್ರಕಟವಾದ 'ವಾಲ್ಮೀಕಿ ಸಂದೇಶ' ದಲ್ಲಿ ೧೯೮೫ ರಿಂದ ೮೭ರವರೆಗೆ ಬೆಳಕು ಕಂಡಿತು.

'ದುರ್ಗದ ಧವಳಕೀರ್ತಿ' ಕಾದಂಬರಿಯನ್ನು ಸವಿವರವಾಗಿ ಅಧ್ಯಯನಿಸಿದ ಇತಿಹಾಸ ಸಂಶೋಧಕ ಪ್ರೊ.ಲಕ್ಷ್ಮಣ್ ತೆಲಗಾವಿಯವರು, ವೀರನಾಯಕರಿಗೆ ಇತಿಹಾಸದಲ್ಲಿರುವ ಅರಿವು, ತಿಳಿವಳಿಕೆ, ವಿಚಾರಶಕ್ತಿ ಮೊದಲಾದವುಗಳನ್ನು ಕಂಡು ಬೆರಗಾದುದು ವ್ಯಕ್ತಪಡುತ್ತದೆ. "ಇತಿಹಾಸ ಸಂಶೋಧಕರಿಗೆ ಆಹಾರ ನೀಡಬಲ್ಲ ಅರ್ಹತೆ ಈ ಕೃತಿಗಿದೆ. ಚಿತ್ರದುರ್ಗ ಇತಿಹಾಸ ಕುರಿತಾದ ಕಾದಂಬರಿಗಳಲ್ಲಿ ಇದು 'ವಸ್ತುನಿಷ್ಠ' ಕೃತಿಯಾಗಿದೆ"[೧] ಎಂದು ವ್ಯಕ್ತಪಡಿಸಿದ ಅವರ ಅಭಿಪ್ರಾಯವು ಈ ಕೃತಿಗೆ ಪೂರ್ತಿ ಅನ್ವಯಿಸುವಂಥಾದ್ದು.

ವೀರನಾಯಕರ ಅನೇಕ ಕೃತಿಗಳಲ್ಲಿ ಪ್ರಥಮವೆನಿಸುವ 'ದುರ್ಗದ ಧವಳಕೀರ್ತಿ'ಯು ಚಿತ್ರದುರ್ಗ ಸಂಸ್ಥಾನದ ನಾಯಕರಿಗೆ ಸಂಬಂಧಿಸಿದುದು. ಈ ಕೃತಿಯು ವೀರನಾಯಕರನ್ನು ಇತರ ವಿದ್ವಾಂಸ-ಸಂಶೋಧಕರೊಡನೆ ಚಿತ್ರದುರ್ಗ ಇತಿಹಾಸದ ಒಂದು ಭಾಗವನ್ನಾಗಿ ಮಾಡಿತೆಂದರೆ ಅತಿಶಯೋಕ್ತಿಯೇನಲ್ಲ. ಇದೊಂದು ವಸ್ತುನಿಷ್ಠ ಸಾಹಿತ್ಯ ಕೃತಿ ಅಥವಾ ಚಾರಿತ್ರಿಕ-ಸಾಹಿತ್ಯ ಕೃತಿ ಎನ್ನುವುದರಲ್ಲಿ ಎರಡು ಮಾತಿಲ್ಲ. ಪ್ರೊ.ತೆಲಗಾವಿಯವರು ಹೇಳಿರುವಂತೆ, "ಕಾದಂಬರಿ ಸ್ವರೂಪದಲ್ಲಿರುವ 'ದುರ್ಗದ ಧವಳಕೀರ್ತಿ'ಯೆಂಬ ನಾಯಕರ ಚರಿತ್ರೆ ಓದುಗರನ್ನು ಚಿತ್ರದುರ್ಗ ಇತಿಹಾಸದ ಅಧ್ಯಯನ ಕೈಗೊಳ್ಳುವಂತೆ ಪ್ರಚೋದನೆ ನೀಡುವುದರಲ್ಲಿ ಸಫಲವಾಗಿದೆ ಎನ್ನಬಹುದು. ನೇರವಾಗಿ ಹೇಳಬಹುದಾದ ಮಾತೆಂದರೆ, ಈ ಕಾದಂಬರಿಯಲ್ಲಿ ವೀರನಾಯಕರು ತಮ್ಮ ದೀರ್ಘಕಾಲದ ಅಧ್ಯಯನದ ಫಲವಾಗಿ ಸಂಗ್ರಹಿಸಿಕೊಟ್ಟಿರುವ ಸಾಮಗ್ರಿಯು ಇತಿಹಾಸ ಸಂಶೋಧಕರಿಗೆ ಹೆಚ್ಚಿನ ಅಧ್ಯಯನಕ್ಕೆ ಆಹ್ವಾನ ನೀಡುವಂತಿದೆ. ಚಿತ್ರದುರ್ಗ ಇತಿಹಾಸ ಕುರಿತಾದ ಕಾದಂಬರಿಗಳಲ್ಲಿ ಇದು ವಸ್ತುನಿಷ್ಠವಾದುದೆಂಬುದನ್ನು ಸಮರ್ಥಿಸಿದೆ."[೨]

ವೀರನಾಯಕರು ರಚಿಸಿದ ಮತ್ತೊಂದು ಕೃತಿಯೇ 'ಕಣ್ಮರೆಯಾದ ಕನ್ನಡದ ಕಲಿನಾಡು'; ಐತಿಹಾಸಿಕ ವಿಷಯ ವಸ್ತುವುಳ್ಳ ಕಾದಂಬರಿ. ಈಗಾಗಲೇ ಗಮನಿಸಿದಂತೆ, ಈ ಜನಪ್ರಿಯ ಕಾದಂಬರಿ ಮೊದಲಿಗೆ ಬೆಳಕುಕಂಡುದು 'ವಾಲ್ಮೀಕಿ ಸಂದೇಶ' ಮಾಸಪತ್ರಿಕೆಯಲ್ಲಿ. ಇದು ನಾಯಕರ ಯುದ್ಧಸಾಮರ್ಥ್ಯ, ಕೆಚ್ಚು ಮೊದಲಾದ ವೀರಗುಣಗಳ ಬಗ್ಗೆ ಸಮರ್ಥಿಸಲು ಪ್ರಯತ್ನಿಸುತ್ತದೆ. ಚಿತ್ರದುರ್ಗ ಸಂಸ್ಥಾನದ ಕಡೆಯ ದೊರೆ ಚಿಕ್ಕಮದಕರಿನಾಯಕ ಅಥವಾ ರಾಜಾ ವೀರಮದಕರಿನಾಯಕನ ಆಳ್ವಿಕೆಯ ಅವಧಿ ಹಾಗೂ ೧೭೭೯ರಲ್ಲಿ ಹೈದರ್‌ಅಲಿ ಜತೆಗೆ ನಡೆಸಲಾದ ಕೊನೆಯ ಯುದ್ಧದ ಬಗ್ಗೆ ಹಾಗೂ ಚಿತ್ರದುರ್ಗ ಸಂಸ್ಥಾನದ ಪತನದ ಬಗ್ಗೆ ನಿರೂಪಿಸುತ್ತದೆ. ವೀರನಾಯಕರ ಇಲ್ಲಿಯ ಬರಹ ಓದುಗರನ್ನು ರೋಮಾಂಚನಗೊಳಿಸುವಂಥಾದ್ದು. 'ಕಣ್ಮರೆಯಾದ ಕನ್ನಡದ ಕಲಿನಾಡು' ಮೂಲತಃ ಕಾದಂಬರಿಯಾದರೂ ಇದು ರಚಿತವಾಗಿರುವುದು ಇತಿಹಾಸ ಬರವಣಿಗೆಯ ಶೈಲಿಯಲ್ಲಿಯೇ ಎನ್ನಬಹುದು. ಇದಕ್ಕೆ ಇತಿಹಾಸದ ಬಗ್ಗೆ ವೀರನಾಯಕರಿಗಿದ್ದ ಅಪಾರವಾದ ಆಸಕ್ತಿಯೇ ಕಾರಣವಾಗಿದೆಯೆನ್ನಬೇಕು.

ಆದ್ದರಿಂದಲೇ ವೀರನಾಯಕರ ಬರಹವು ಸತ್ವಯುತವಾಗಿದೆ. ಚಾರಿತ್ರಿಕ ಹಿನ್ನೆಲೆಯಿಂದ ಕಾದಂಬರಿಯನ್ನು ರಚಿಸುವುದು ಅವರಿಗೆ ಕರಗತವಾಗಿದ್ದಿತೆನ್ನುವುದು ಇಲ್ಲಿ ಮುಖ್ಯ. ಅವರ ಕಾದಂಬರಿಗಳು ಕೇವಲ ಸಾಹಿತ್ಯ ಕೃತಿಗಳಲ್ಲ; ವಿಪುಲ ಚಾರಿತ್ರಿಕ ಅಂಶಗಳಿಂದ ತುಂಬಿದ ಸಂಶೋಧನ ಕೃತಿಗಳಾಗಿ ಕಂಡುಬರುತ್ತವೆಂದರೆ ಉತ್ಪ್ರೇಕ್ಷೆಯಲ್ಲ. ಕಥೆಗಾರ-ವಿಮರ್ಶಕ ಟಿ.ಆರ್.ರಾಧಕೃಷ್ಣ ಅವರು ವ್ಯಕ್ತಪಡಿಸಿರುವ ಅಭಿಪ್ರಾಯವಿದು : "'ಕಣ್ಮರೆಯಾದ ಕನ್ನಡದ ಕಲಿನಾಡು' ಐತಿಹಾಸಿಕ ಸಂಗತಿಗಳ, ಸಾಮಗ್ರಿಗಳ ಅದ್ಭುತ ಉಗ್ರಾಣ. ಇದನ್ನು ಯಾರಾದರೂ ಸಮರ್ಥರು, ಪ್ರತಿಭಾಶಾಲಿಗಳು ಉಪಯೋಗಿಸಿಕೊಂಡು ಹೆಚ್ಚಿನ ಕೃತಜ್ಞತೆಯನ್ನು ಲೇಖಕರಿಗೆ ಅರ್ಪಿಸುತ್ತಲೇ ಹೊಸ ಕಾದಂಬರಿಗಳನ್ನು ಬರೆದರೆ ಈ ನೆಲದ ಬಗೆಗೆ ಇರುವ ರೋಚಕ ಇತಿಹಾಸಕ್ಕೆ ಉತ್ತಮ ಕೊಡುಗೆಯಾಗಲಾರದೆ ಎಂಬ ಒಂದು ಊಹೆ ಒಬ್ಬ ಓದುಗನಿಗೆ ಬಂದರೆ ಆಶ್ಚರ್ಯವಿಲ್ಲ."[೩]

ವೀರನಾಯಕರು ಬಯಲುನಾಟಕಗಳನ್ನೂ ರಚಿಸಿದ್ದಾರೆ. ಸ್ವತಃ ನಾಟಕಗಳನ್ನೂ ನಿರ್ದೇಶನ ಮಾಡಿದಂಥವರು. ಆ ಮೂಲಕ ಜನಪದ ರಂಗಕಲೆಯ ಬಗ್ಗೆ ತಮ್ಮಲ್ಲಿದ್ದ ಆಸಕ್ತಿಯನ್ನೂ ಅವರು ತೋರಿಸಿಕೊಟ್ಟಿದ್ದಾರೆ. 'ಕರಿಭಂಟ', 'ದಾನಶೂರ ಕರ್ಣ', 'ಬಭ್ರುವಾಹನನ ಕಾಳಗ' ಮುಂತಾದವು ವೀರನಾಯಕರು ಬರೆದ ನಾಟಕಗಳು. ಇವು ಪೌರಾಣಿಕ ಸ್ವರೂಪದವು. ಹಾಗೆಯೇ 'ದ್ರೋಣಶಪಥಂ' 'ಬರಗಾಲ' 'ದುರ್ಗದಸಿಂಹಿಣಿ ಓಬವ್ವ' ಇತ್ಯಾದಿ ಕ್ರಾಂತಿಕಾರಿ ನಾಟಕಗಳೂ ಇವರವೇ. ಅವರು ಹಲವಾರು ಬಯಲುನಾಟಕಗಳಿಗೆ ಸಂಭಾಷಣೆಗಳನ್ನು ಬರೆಯುತ್ತಿದ್ದರು ಮಾತ್ರವಲ್ಲ, ಮುಮ್ಮೇಳದಲ್ಲಿ ಸೇರಿ ಹಾಡುತ್ತಿದ್ದರು.

ಇತರ ಬರಹಗಾರರನ್ನು, ಅದರಲ್ಲೂ ಯುವಬರಹಗಾರರನ್ನು ಗುರುತಿಸುವ ಹಾಗೂ ಪ್ರೋತ್ಸಾಹಿಸುವ ಸ್ವಭಾವವುಳ್ಳವರಾಗಿದ್ದರು ವೀರನಾಯಕರು. ಒಮ್ಮೆ ಸ್ಮರಣಸಂಚಿಕೆಯನ್ನು ಹೊರತರುವ ಹೊಣೆ ಹೊತ್ತಿದ್ದರು ವೀರನಾಯಕರು. ಆಗ ಸಂಚಿಕೆಯ ಸಂಪಾದನೆ ಮತ್ತು ಮುದ್ರಣಕ್ಕೆ ಸಂಬಂಧಿಸಿದಂತೆ ಉತ್ಸಾಹಿ ಯುವ

ಲೇಖಕರೊಬ್ಬರನ್ನು ಅವರು ಆಯ್ಕೆ ಮಾಡಿದಾಗ, ಇತರರು ಆ ಬಗ್ಗೆ ಅನುಮಾನ ಪಡುವಂತಾಯಿತು. ಆದರೆ ಜನಾಂಗದ ಪ್ರತಿಭಾವಂತ ಯುವಲೇಖಕ ಬಿ.ತಿಪ್ಪಣ್ಣ ಮರಿಕುಂಟೆಯವರಿಂದಲೇ ಸಂಚಿಕೆಯ ಸಂಪಾದನೆ ಮಾಡಿಸಿದರು. ಆಕ್ಷೇಪಿಸಿದವರಿಗೆ ಅವರು ಉತ್ತರಿಸಿದುದಿಷ್ಟು: "ಮರಿಕುಂಟೆಗೆ ಆ ಜವಾಬ್ದಾರಿಯನ್ನು ಕೊಡೋಣ. ಹುಡುಗ ಚೆನ್ನಾಗಿ ಬರೆಯಬಲ್ಲ. ಸ್ವಂತ ಮುದ್ರಣಾಲಯವೂ ಇದೆ. ಕಾರ್ಯ ಸಕಾಲಕ್ಕೆ ಆಗುತ್ತದೆ."[೪] ಮರಿಕುಂಟೆಯವರು ವೀರನಾಯಕರ ನಂಬಿಕೆ-ನಿರೀಕ್ಷೆಗಳನ್ನು ಹುಸಿಮಾಡಲಿಲ್ಲ. ಸಂಚಿಕೆಯನ್ನು ಸಕಾಲಕ್ಕೆ ಸುಂದರವಾಗಿ ಮುದ್ರಿಸಿ ಬೇರೆಯವರು ಹುಬ್ಬೇರಿಸುವಂತೆ ಮಾಡಿ ತಮ್ಮ ಸಾಮರ್ಥ್ಯ ತೋರಿದರು.

ವೀರನಾಯಕರ ಮತ್ತೊಂದು ಕೃತಿಯೆಂದರೆ 'ಗುಮ್ನಳ್ಳಿ ಕದನ'. ನಮ್ಮ ಜನಪದರು ಯಾವ ಪರಿಕಲ್ಪನೆಯ ನೆಲೆಯಲ್ಲಿ ಸ್ಥಳೀಯ ಚರಿತ್ರೆಯನ್ನು ರೂಪಿಸಿ ಕೊಟ್ಟಿದ್ದಾರೆನ್ನುವುದಕ್ಕೆ 'ಗುಮ್ನಳ್ಳಿ ಕದನ'ವು ಉತ್ತಮ ಸಾಕ್ಷಿಯಾಗಿದೆ. ಚರಿತ್ರೆ ಬರವಣಿಗೆಯಲ್ಲಿ ಮೌಖಿಕ ಆಕರವನ್ನು ಬಳಸಿಕೊಳ್ಳಬೇಕೆನ್ನುವ ಇತಿಹಾಸಕಾರರನೇಕರ ಅಭಿಪ್ರಾಯವು ಕಾರ್ಯರೂಪಕ್ಕೆ ಬರುವ ವೇಳೆಗಾಗಲೇ ವೀರನಾಯಕರು ಅದನ್ನು ಈ ಕೃತಿಯ ಮೂಲಕ ಸಾಧಿಸಿದ್ದಾರೆನ್ನಬಹುದು. ಇದು ಹೆಸರೇ ಸೂಚಿಸುವಂತೆ 'ಗುಮ್ನಳ್ಳಿ' ಎಂಬ ಗ್ರಾಮದ ಬಳಿ ನಡೆದ ಭೀಕರ ಕಾಳಗದ ಘಟನೆಯನ್ನು ಕುರಿತು ನಿರೂಪಿಸುತ್ತದೆ 'ಗುಮ್ನಳ್ಳಿ ಕದನ'. ವಾಸ್ತವದಲ್ಲಿ, 'ಗುಮ್ನಳ್ಳಿ ಕದನ'ದಂತಹ ಗ್ರಾಮಕೇಂದ್ರಿತ ಚಾರಿತ್ರಿಕ ಬರಹವು ಪ್ರಾದೇಶಿಕ ಚರಿತ್ರೆಯನ್ನು ಪ್ರತಿನಿಧಿಸುವಂಥಾದ್ದು. ನವಪೀಳಿಗೆಯ ಬರಹಗಾರರು ಈ ಬಗೆಯ ಸಂಶೋಧನೆಯಿಂದ ಕಲಿಯಬೇಕಾದದ್ದು ಸಾಕಷ್ಟಿದೆ. ವೀರನಾಯಕರ ಬರಹಗಳ ಸಾರ್ಥಕತೆ ವ್ಯಕ್ತಪಡುವುದೇ ಇಂಥಾ ಕೃತಿಗಳಿಂದ ಎನ್ನಬಹುದು.

ವೀರನಾಯಕರು ತಮ್ಮ ಅಧ್ಯಯನದಲ್ಲಿ ಅನೇಕ ಮುನ್ನೋಟಗಳನ್ನು ಹೊಂದಿದ್ದರು. ಪ್ರಸ್ತುತ ಸಂದರ್ಭದಲ್ಲಿ ತೀವ್ರ ಚರ್ಚೆಗೊಳಪಡುತ್ತಿರುವ ಪ್ರಾದೇಶಿಕ ಹಾಗೂ ಜಾನಪದೀಯ ಚರಿತ್ರೆಯ ಅಧ್ಯಯನದ ಅಗತ್ಯವನ್ನು ಹಾಗೂ ಸ್ವರೂಪವನ್ನು ಅವರು ಅಂದೇ ಗ್ರಹಿಸಿದ್ದರು. ಈ ಕೃತಿ ವೀರನಾಯಕರ ಮರಣದ ನಂತರ, ಅಂದರೆ ೧೯೮೩ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟಗೊಂಡಿತು. ವೀರನಾಯಕರ ಇಂಥಾ ಉಪಯುಕ್ತ ಕಾರ್ಯವನ್ನು ನೆನೆಯಲೇಬೇಕು.

ನಾಯಕರು ರಚಿಸಿದ ಮತ್ತೊಂದು ನಾಟಕ 'ದುರ್ಗದಸಿಂಹಿಣಿ ಓಬವ್ವ'. ಇದರಲ್ಲಿ ತಮ್ಮ ಸಮಕಾಲೀನ ಪರಿಶಿಷ್ಟಜಾತಿ-ವರ್ಗಗಳವರನ್ನು, ಗಿರಿಜನರನ್ನು, ಬುಡಕಟ್ಟುಗಳಿಗೆ ಸೇರಿದ ಜನರನ್ನು, ಹಿಂದುಳಿದ ವರ್ಗ ಗಳವರನ್ನು, ಬೇಡರ ಮೊದಲಾದವರ ಸ್ಥಿತಿ-ಗತಿಗಳನ್ನು ಸೂಕ್ಷ್ಮವಾಗಿ ಚಿತ್ರಿಸಲು ಪ್ರಯತ್ನಿಸಿ ದ್ದಾರೆ. ದಲಿತರ ಪ್ರಸ್ತುತ ಆಗುಹೋಗುಗಳಿಗೆ, ಆಲೋಚನೆಗಳಿಗೆ ಸ್ಪಂದಿಸುವ ನಿಟ್ಟಿನಲ್ಲಿ ವೀರನಾಯಕರ ನಿಲುವನ್ನು ದಾಖಲಿಸಿಕೊಂಡಿರುವ ಕೃತಿ ಇದಾಗಿದೆಯೆನ್ನಬಹುದು.

ಪ್ರೊ.ಲಕ್ಷ್ಮಣ್ ತೆಲಗಾವಿಯವರು ಹೇಳಿರುವಂತೆ, "ಆಕೆಯ ಸನ್ನಿವೇಶದೊಡನೆ ಹೈದರ್‌ಅಲಿಯು ದುರ್ಗಕ್ಕೆ ಮುತ್ತಿಗೆ ಹಾಕಲು ಸನ್ನಾಹ ನಡೆಸಿದುದು, ದುರ್ಗದಲ್ಲಿ ಕೆಲವರು ಅವನ ಪರವಾಗಿ ಪಿತೂರಿ

ಮಾಡಿದುದು, ನಾಯಕರು ಮತ್ತು ಅವರ ಅನುಚರರು ಅದನ್ನು ವಿಫಲಗೊಳಿಸಲು ಪ್ರಯತ್ನಿಸಿದುದು, ಆ ಕಾರ್ಯದಲ್ಲಿ ಓಬವ್ವೆಯು ತನ್ನದೇ ಸೇವೆಸಲ್ಲಿಸಿದುದು ಇತ್ಯಾದಿ ಸಂಗತಿಗಳನ್ನು ಇಲ್ಲಿ ನಾಟಕರೂಪದಲ್ಲಿ ನಿರೂಪಿಸಲಾಗಿದೆ. ನಾಟಕದ ಕಥಾವಸ್ತು ತೀರಾ ಜಿಜ್ಞಾಸೆಗೆ ಒಳಪಟ್ಟದ್ದು ಎಂಬುದನ್ನು ಪ್ರತ್ಯೇಕವಾಗಿಯೇ ಹೇಳಬೇಕು.”[೫] ಇದರಿಂದ ರಾಜಕೀಯ ಸನ್ನಿವೇಶದ ಹಿನ್ನೆಲೆಯಲ್ಲಿ ವೀರನಾಯಕರು ಶ್ರೀಸಾಮಾನ್ಯರ ಸೇವಾನಿಷ್ಠೆ ಮತ್ತು ತ್ಯಾಗಗಳನ್ನು ಗುರುತಿಸಿಕೊಡಲು ಈ ನಾಟಕದ ಮೂಲಕ ಪ್ರಯತ್ನಿಸಿದ್ದಾರೆನ್ನಬಹುದು.

ವಿಮರ್ಶೆಯ ನೆಲೆಯಲ್ಲಿ 'ದುರ್ಗದ ಧವಳಕೀರ್ತಿ'ಯ ಪೀಠಿಕೆಯನ್ನು ಸೂಕ್ಷ್ಮವಾಗಿ ಗಮನಿಸಬೇಕಾಗುತ್ತದೆ. ಅದು ಇತಿಹಾಸ ಶೋಧನೆಯ ಕೃತಿಯೇನಲ್ಲವಾದರೂ ಅವರು ತಮ್ಮ ಕಾದಂಬರಿಗಾಗಿಯೇ ಆಧರಿಸಿದ ದಾಖಲೆಗಳನ್ನು ಗಮನಿಸಿದರೆ ಆಶ್ಚರ್ಯವೆನಿಸುತ್ತದೆ. ವೀರನಾಯಕರು ಚಿತ್ರದುರ್ಗದ ಇತಿಹಾಸಕ್ಕೆ ಸಂಬಂಧಿಸಿದ ಲೇಖನ, ಪುಸ್ತಕ, ವರದಿ ಮೊದಲಾದುವನ್ನು ಸಮಗ್ರವಾಗಿ ಅಧ್ಯಯನಿಸಿರುವುದು ಗಮನಕ್ಕೆ ಬರುತ್ತದೆ. ಆದರೆ 'ದುರ್ಗದ ಧವಳಕೀರ್ತಿ' ಕಾದಂಬರಿಯಲ್ಲಿ ಅವರು ನೇರವಾಗಿ ಚಿತ್ರದುರ್ಗ ಪಾಳೆಯಪಟ್ಟಿನ ಇತಿಹಾಸವನ್ನು ಮುಟ್ಟುವುದಿಲ್ಲ. ದೆಹಲಿಯಲ್ಲಿ ಚಿತ್ರನಾಯಕನು ಮದಿಸಿದ ಆನೆಯನ್ನು ಪಳಗಿಸಿದ್ದು ಹಾಗೂ ಅಲ್ಲಿನ ಸುಲ್ತಾನನಿಂದ ವಜೀರ್ ಪದವಿ ಪಡೆದು ದಕ್ಷಿಣದ ಕಡೆಗೆ ಹಿಂದಿರುಗಿದ್ದು- ಇಂಥಾ ಮೂಲಕಥೆಯಿಂದ ಆರಂಭಗೊಳಿಸುತ್ತಾರೆ.

ಯಾವುದೇ ಕೃತಿಯನ್ನು ರಚಿಸುವ ಪೂರ್ವದಲ್ಲಿ ವೀರನಾಯಕರು ಅನೇಕ ಪ್ರದೇಶಗಳಲ್ಲಿ ಮಾಹಿತಿಗಾಗಿ ಹುಡುಕಾಟ ನಡೆಸಿದುದುಂಟು. ಅದಕ್ಕಾಗಿ ಪ್ರವಾಸ ಕೈಗೊಂಡು ವಿವಿಧ ಜನರನ್ನು ಭೇಟಿ ಮಾಡಿ ದಾಖಲೆಗಳನ್ನು ಸಂಗ್ರಹಿಸಲೆತ್ನಿಸುತ್ತಿದ್ದರು. ಪಡೆದುಕೊಂಡ ದಾಖಲೆಗಳನ್ನು ಸರಿಯಾಗಿ ಪರಿಶೀಲಿಸಿ ಸೂಕ್ತವಾಗಿ ಬಳಸಿಕೊಳ್ಳುತ್ತಿದ್ದರು. ಕನಕಗಿರಿ ಮತ್ತು ರತ್ನಗಿರಿ ಪಾಳೆಯಗಾರರಿಗೆ ಸಂಬಂಧಿಸಿದ ದಾಖಲೆಗಳು, ಅನ್ನೇಹಾಳು ಕಾಳೋಬಯ್ಯನವರು ಸಂಗ್ರಹಿಸಿದ ವಿಚಾರಗಳು ಮೊದಲಾದುವನ್ನು ಆದ್ಯಂತವಾಗಿ ಪರಿಶೀಲಿಸಿ ಟಿಪ್ಪಣಿ ಮಾಡಿಕೊಂಡು ಸೂಕ್ತ ರೀತಿಯಲ್ಲಿ ಬಳಸಿಕೊಂಡಿದ್ದಾರೆ. ಅಧಿಕೃತ ಚಾರಿತ್ರಿಕ ದಾಖಲೆಗಳನ್ನು ಮಾತ್ರವೇ ಅಲ್ಲ, ಪೂರಕ ಸಂಗತಿಗಳಾಗಿ ಮೌಖಿಕ ಆಕರಗಳಿಂದಲೂ ಮಾಹಿತಿ ಸಂಗ್ರಹಿಸಿದ್ದಾರೆ.

'ಗುಮ್ಮಳ್ಳಿ ಕದನ' ಕೃತಿಯನ್ನು ಕುರಿತು ಎಂ.ವಿ.ಚಿತ್ರಲಿಂಗಯ್ಯನವರು ಈ ರೀತಿ ಹೇಳಿದ್ದಾರೆ : “ಇಲ್ಲಿನ ಯಾವುದೇ ತ್ರಿಪದಿಗೂ ನಿಸ್ಸಂದೇಹಾಸ್ಪದವಾದ ವ್ಯಾಖ್ಯಾನವನ್ನು ಕೊಟ್ಟಿರುವುದರಿಂದ ಶಿರಾ ಪಾಳೇಗಾರರ ಕೊನೆಯ ಪಾಳೇಗಾರ ರಾಜರಂಗಪ್ಪನಾಯಕರ ಆಳ್ವಿಕೆಯ ಅಂತಿಮಘಟ್ಟವನ್ನು ಇದು ಖಚಿತವಾಗಿ ತಿಳಿಸುತ್ತದೆ.”[೬] ಅವರು ಮುಂದುವರೆದು, ಈ ಬರಹವು ವೀರನಾಯಕರು 'ಇತಿಹಾಸಜ್ಞ' ಎಂಬ ಉಪಾಧಿಗೆ ಸರಿಹೊಂದುವರೆಂಬುದನ್ನು ಸ್ಪಷ್ಟೀಕರಿಸುತ್ತದೆ ಎಂದಿರುವರು. ಈ ಕೃತಿಯ ಕಾಲಮಾನವನ್ನು ಗುರುತಿಸಲು ವೀರನಾಯಕರು ಶ್ರಮಿಸಿರುವುದನ್ನು ನೋಡಬಹುದು.

ವೀರನಾಯಕರ ಬರಹಗಳು ದಾಖಲೆ, ಶಾಸನ, ಸ್ಮಾರಕ, ಜಯರೇಖೆ, ಕಾಗದ ಪತ್ರ ಮೊದಲಾದ ಮೂಲಾಧಾರಗಳನ್ನಾಧರಿಸಿ ರಚನೆಗೊಂಡಂಥವು. ಅವುಗಳಲ್ಲಿ ಸಾಕಷ್ಟು ಮಾಹಿತಿಯಿದೆ. ಅನುಭವದ ನೆಲೆ

ಯಲ್ಲಿ ಪರಿಭಾವಿಸಿದುದನ್ನು ಅಭಿವ್ಯಕ್ತಿಸುವ ನಿಟ್ಟಿನಲ್ಲಿ ಅವರ ಬರಹಗಳು ಅಮೂಲ್ಯವೆನಿಸುತ್ತವೆ. ಅವರ ಬರಹಗಳು ಬೇಡಜನಾಂಗಕ್ಕೆ ಮಾತ್ರ ಸೀಮಿತವಾಗಿರದೆ, ಪ್ರಾದೇಶಿಕವಾಗಿ ಕರ್ನಾಟಕದ ಸಣ್ಣ-ಪುಟ್ಟ ಸಂಸ್ಥಾನಿಕರ, ಅರಸು ಮನೆತನಗಳ ಮಾಹಿತಿಯನ್ನೂ ಒಳಗೊಂಡಿವೆ.

ಅವರ ಬರಹಗಳು ಸಾಕಷ್ಟು ಪರಿಶ್ರಮದ ನೆಲೆಯಲ್ಲಿ ರಚಿತವಾದುವು. ಇದನ್ನು ಅವರು ತಮ್ಮ 'ದುರ್ಗದ ಧವಳಕೀರ್ತಿ' ಕಾದಂಬರಿಯ ಪ್ರಸ್ತಾವನೆಯಲ್ಲಿ ಹೇಳಿಕೊಂಡಿದ್ದಾರೆ. ಚಿತ್ರದುರ್ಗ ಸಂಸ್ಥಾನದ ಪ್ರಸಿದ್ಧ ನಾಯಕರುಗಳಾದ ಚಿತ್ರನಾಯಕ ಮತ್ತು ಮತ್ತಿತಿಮ್ಮಣ್ಣನಾಯಕರ ಕಾಲಾವಧಿ ಕುರಿತು ನಿರ್ಣಯಕ್ಕೆ ಬರಲು ವೀರನಾಯಕರಿಗೆ ಸುಮಾರು ಹತ್ತುವರ್ಷಗಳ ಕಾಲಾವಧಿ ಹಿಡಿಯಿತಂತೆ. ಅವರು ತಮ್ಮ ಈ ಕಾದಂಬರಿಯಲ್ಲಿ ಮತ್ತಿತಿಮ್ಮಣ್ಣನಾಯಕನ ಒಂದು ಮುಖವನ್ನು ಮಾತ್ರ ಪರಿಚಯಿಸಿದ್ದರೆ, ತಾವೇ ರಚಿಸಿದ ನಾಟಕ ಕೃತಿಯಲ್ಲಿ ತಿಮ್ಮಣ್ಣನಾಯಕನ ಇನ್ನೊಂದು ಮುಖವನ್ನು ತೋರಿಸಲು ಪ್ರಯತ್ನಿಸಿದ್ದಾರೆ.

ತಮ್ಮ ಬರವಣಿಗೆಯ ಮಟ್ಟಿಗೆ ವೀರನಾಯಕರು ವಸ್ತುನಿಷ್ಠ ದೃಷ್ಟಿಕೋನ ಹೊಂದಿದ್ದರೆನ್ನಬಹುದು. ಬರವಣಿಗೆಯ ಪೂರ್ವದಲ್ಲಿ ಆಯ್ದುಕೊಂಡ ವಿಷಯ ಕುರಿತು ದೀರ್ಘವಾಗಿ ಆಲೋಚಿಸಿ ರೂಪ-ರೇಖೆಗಳನ್ನು ನಿರ್ಧರಿಸಿಕೊಳ್ಳುತ್ತಿದ್ದರು. ತಾವು ಗಮನಿಸಿದ ಯಾವುದೇ ವಿಷಯವನ್ನು ಸರಿಯಾಗಿ ವಿಶ್ಲೇಷಿಸದೆ ಬರವಣಿಗೆಗೆ ಕೈ ಹಾಕುತ್ತಿರಲಿಲ್ಲ. ಅವರ ಚಿಂತನೆ-ಧೋರಣೆಗಳನ್ನು ಸ್ಪಷ್ಟವಾಗಿ ಅರಿಯಲು ನೆರವಾಗುವಂಥಾ ಅವರ ಇತರ ಎರಡು ಪುಸ್ತಕಗಳೆಂದರೆ 'ಕ್ಷಾತ್ರಾಂಶ ಪ್ರಬೋಧ' ಮತ್ತು 'ರಾಷ್ಟ್ರಸೇವೆಯಲ್ಲಿ ನಾಯಕಜನಾಂಗ'. ಇವು ಅವರ ವೈಚಾರಿಕಪ್ರಜ್ಞೆಯ ಪ್ರತೀಕಗಳಂತಿವೆ. ವೀರನಾಯಕರಿಗೆ ಬರವಣಿಗೆಯು ಜೀವನದ ಒಂದು ಭಾಗವಾಗಿತ್ತೆನ್ನ ಬಹುದು.

'ಕಣ್ಮರೆಯಾದ ಕನ್ನಡದ ಕಲಿನಾಡು' ಎಂಬ ಕಾದಂಬರಿಯಲ್ಲಿ ಚಿತ್ರದುರ್ಗದ ಕೊನೆಯ ನಾಯಕನಾದ ರಾಜಾ ವೀರಮದಕರಿನಾಯಕನ ಬದುಕಿನ ರಸಸನ್ನಿವೇಶಗಳನ್ನು ಹಾಗೂ ದುರಂತ ಸನ್ನಿವೇಶಗಳನ್ನು ಸಮಗ್ರವಾಗಿ ಚಿತ್ರಿಸಲು ಪ್ರಯತ್ನಿಸಿದ್ದಾರೆ ವೀರನಾಯಕರು. ಈ ಕೃತಿಗೆ ಸಂಬಂಧಿಸಿದಂತೆ ವಿವಿಧ ವಿಷಯಗಳ ಮಂಥನ ಹಾಗೂ ಮೂಲಆಕರಗಳ ಪರಾಮರ್ಶನ ನಡೆಸಿರುವುದನ್ನು ನೋಡಬಹುದು. ಅನೇಕ ಸಂಗತಿಗಳ ಮರುವಿಮರ್ಶೆ ಕೈಗೊಂಡಿರುವುದು ಸಹಾ ಕಂಡುಬರುತ್ತದೆ. ಈ ಕಾದಂಬರಿಯ ರಚನಾಕಾರ್ಯವು ಅವರ ಅಂತಿಮ ದಿನಗಳವರೆವಿಗೂ ಮುಂದುವರೆದಿತ್ತು.

ತಮ್ಮ ಕಾದಂಬರಿಯ ವಸ್ತುವಾಗಿ ರಾಜಾ ವೀರಮದಕರಿನಾಯಕನನ್ನು ಬಳಸಿಕೊಂಡ ವೀರನಾಯಕರು, ತಮ್ಮ ನಿರೂಪಣೆ ಬಗೆಗೆ ಅಪಾರ ವಿಶ್ವಾಸ ಹೊಂದಿದ್ದರು. ತಾವು ರಚಿಸುವುದು ಸಾಹಿತ್ಯಕೃತಿಯೆಂದಾದರೂ ಅದು ಇತಿಹಾಸ ಸಂಶೋಧನ ಕೃತಿಯಷ್ಟೇ ಮಹತ್ವದ್ದೆಂದು ಭಾವಿಸಿದ್ದರು. ಅವರೇ ಒಂದೆಡೆ ಹೇಳಿಕೊಂಡಂತೆ, "ಯಾರು ಏನೇ ಬರೆಯಲಿ. ಮದಕರಿನಾಯಕನ ಬಗೆಗೆ ನನಗೆ ತೋಚಿದುದನ್ನು, ಅಧ್ಯಯನ ಮಾಡಿದುದನ್ನು ಹಾಗೂ ಸತ್ಯವೆಂದು ತೋರಿದುದನ್ನು ಮಾತ್ರ ಬರೆಯುತ್ತೇನೆ. ಸಂಶೋಧನಕೃತಿಗಳಷ್ಟೇ ಸತ್ಯಸಂಗತಿಗಳನ್ನು

ಒಳಗೊಂಡಿವೆ ಎಂದಾದರೆ ಕಾದಂಬರಿಗಳು ಕೇವಲ ಕಾಲ್ಪನಿಕವೆಂದೇನೂ ಅಲ್ಲ. ಅವುಗಳಲ್ಲೂ ಸತ್ಯಸಂಗತಿಗಳು ಸಾಕಷ್ಟಿರಬಹುದಲ್ಲವೆ? ಜನಜನಿತವಾದ ಕತೆಗಳನ್ನೂ ನಾವು ಒರೆಗೆ ಹಚ್ಚಿನೋಡಬೇಕು. ಅವುಗಳಲ್ಲಿನ ಸತ್ಯವನ್ನು ಅರಿಯಬೇಕು. ನನ್ನ ಕೃತಿಯಲ್ಲಿ ಪ್ರಸ್ತಾಪಿಸಲಿರುವ ಸಂಗತಿಗಳನ್ನೂ ಸಂಶೋಧಕರು ಮುಂದೆ ಒಂದು ದಿವಸ ಬಳಸಿಕೊಳ್ಳಬಹುದು."[೭] ವೀರನಾಯಕರಲ್ಲಿದ್ದ ಈ ಆತ್ಮವಿಶ್ವಾಸ ತೀರಾ ಅಪರೂಪದ್ದು.

ಅವರಲ್ಲಿ ಬರವಣಿಗೆಯ ತೀವ್ರತೆ ವಿಪರೀತವಾಗಿರುತ್ತಿತ್ತು. ಸದಾ ಅದರ ಗುಂಗಿನಲ್ಲಿಯೇ ಇರುತ್ತಿದ್ದುದನ್ನು ಸಮೀಪವರ್ತಿಗಳು ವ್ಯಕ್ತಪಡಿಸಿದ್ದಾರೆ. ಹೊಸ ಮಾಹಿತಿ ದೊರೆತಾಗ ಅಥವಾ ಹೊಸ ಹೊಳಹು ಕಂಡುಕೊಂಡಾಗ ಅವರು ಸಂಭ್ರಮಿಸುತ್ತಿದ್ದರು. ಅದನ್ನು ಆಸಕ್ತರ ಬಳಿ ವ್ಯಕ್ತಪಡಿಸುತ್ತಿದ್ದರು. ಆ ನಂತರ ಆ ವಿಚಾರವನ್ನು ವಿಶದವಾಗಿ ವಿಮರ್ಶಿಸಿದ ನಂತರ ಅದನ್ನು ಬರಹರೂಪಕ್ಕೆ ಇಳಿಸುತ್ತಿದ್ದರು. ಇದು ಅವರಲ್ಲಿ ಸಾಮಾನ್ಯವಾಗಿ ಕಂಡುಬರುತ್ತಿದ್ದ ಉತ್ತಮ ಜಾಯಮಾನ.

ಅವರ ಕೃತಿಗಳನ್ನು ಗಮನಿಸಿದಾಗ ಪ್ರಮುಖವಾಗಿ ಎದ್ದುಕಾಣುವ ಅಂಶವೆಂದರೆ, ಬೇಡಜನಾಂಗ ಅಥವಾ ನಾಯಕರ ಬಗ್ಗೆ ಪ್ರಸ್ತಾಪಿಸುವ ಸಂದರ್ಭ ಒದಗಿದಾಗಲೆಲ್ಲ ವೀರನಾಯಕರು ಒಂದು ರೀತಿಯ ಅಭಿಮಾನದ ಭಾವುಕತೆಗೆ ಒಳಗಾಗುತ್ತಿದ್ದರು. ವಾಲ್ಮೀಕಿ ಸಮಾಜ ಕುರಿತು ಬರೆಯುವಾಗ ಆ ಜನಾಂಗದ ಮಹತ್ವ, ಅವರು ತೋರಿದ ಸಾಹಸ, ಧೈರ್ಯ, ಅವರ ನಡತೆ ಇತ್ಯಾದಿಯನ್ನು ಉದಾಹರಣೆಗಳೊಂದಿಗೆ ರೋಚಕಶೈಲಿಯಲ್ಲಿ ಆಕರ್ಷಕವಾಗಿ ನಿರೂಪಿಸುವುದು ವೀರನಾಯಕರಿಗೆ ತುಂಬಾ ಅಚ್ಚುಮೆಚ್ಚಿನ ವಿಷಯವಾಗಿದ್ದಿತು. ವೀರನಾಯಕರ ಬಹುತೇಕ ಕೃತಿಗಳಲ್ಲಿ ಇಂಥಾ ಗುಣವೇ ಪ್ರಧಾನವಾಗಿ ಕಂಡುಬರುತ್ತದೆ. 'ಕ್ಷಾತ್ರಾಂಶ ಪ್ರಬೋಧ' ಎಂಬ ಕೃತಿಯನ್ನು ಪ್ರಮುಖ ಉದಾಹರಣೆಯಾಗಿ ಇಲ್ಲಿ ತೋರಿಸಬಹುದು. ವೀರನಾಯಕರಲ್ಲಿ ಅಡಕವಾಗಿದ್ದ ಅಭಿಮಾನದ, ಕೆಚ್ಚಿನ ಸ್ವಭಾವವನ್ನು ಈ ಕೃತಿಯು ಪ್ರತಿಬಿಂಬಿಸುತ್ತದೆ. ವಾಸ್ತವದಲ್ಲಿ, ವೀರನಾಯಕರು ತಮ್ಮ ಬರಹಗಳ ಮೂಲಕ ತಮ್ಮ ಜನಾಂಗದವರನ್ನು ಜಾಗೃತಗೊಳಿಸಲು ಶ್ರಮಿಸಿದರೆಂಬುದು ಸ್ಪಷ್ಟ.

ಇತಿಹಾಸಕಾಲದಲ್ಲಿ ಸ್ವಾಭಿಮಾನ, ಶೌರ್ಯ-ಸಾಹಸಗಳಿಂದ ಬದುಕಿದ ನಾಯಕವೀರರು ಇತರರಿಗೆ ಮೇಲ್ಪಂಕ್ತಿಯಾಗಿದ್ದಾರೆ. ಆದರೆ ಈ ಪರಂಪರೆಯಲ್ಲಿ ಬಂದ ಈಗಿನ ಪೀಳಿಗೆಯವರು ದುರ್ಬಲರಂತೆ ವರ್ತಿಸುವುದು, ಭವಿಷ್ಯದ ಬಗೆಗೆ ಅಧೈರ್ಯ ತಾಳಿರುವುದು, ವಿವೇಚನರಹಿತರಾಗಿ ವರ್ತಿಸುತ್ತಿರುವುದು ವೀರನಾಯಕರನ್ನು ಆತಂಕಕ್ಕೊಳಪಡಿಸಿದುದು ಸಹಜ. ಇದರಿಂದ ಕಳವಳಗೊಂಡ ಅವರು ಜಾಗೃತಸಾಹಿತ್ಯ ರಚನೆಯತ್ತ ಗಮನ ಹರಿಸಿದರು. ಅವರು ರಚಿಸಿರುವ ನಾಟಕ, ಕಾದಂಬರಿ ಮುಂತಾದ ಸಾಹಿತ್ಯಕೃತಿಗಳಲ್ಲಿ ಇದನ್ನು ಸ್ಪಷ್ಟವಾಗಿ ಗುರುತಿಸಬಹುದು. ಜನರಲ್ಲಿ ವಾಸ್ತವಪ್ರಜ್ಞೆಯನ್ನು ಮೂಡಿಸುವ ಪ್ರಯತ್ನ ವೀರನಾಯಕರದು.

ಅವರು ಬೇಡಜನಾಂಗದ ಬಗ್ಗೆ ಬರೆಯುವಾಗಲೆಲ್ಲ ಅಭಿಮಾನಕ್ಕೊಳಗಾಗುತ್ತಿದ್ದರೆಂಬುದು ನಿಜವಾದರೂ ಕೇವಲ ನಾಯಕವರ್ಗಕ್ಕೆ ಅವರು ಸೀಮಿತಗೊಂಡವರಲ್ಲವೆನ್ನುವುದು ಮುಖ್ಯ. ಅವರು ಎಲ್ಲಾ ಮತ-

ಧರ್ಮದವರ ಬಗ್ಗೆ ತಮ್ಮ ಕೃತಿಗಳಲ್ಲಿ ಅಭಿಮಾನಪೂರ್ವಕವಾಗಿಯೇ ವ್ಯಕ್ತಪಡಿಸಿದ್ದಾರೆ. ಸಮಾಜದಲ್ಲಿರುವ ತ್ಯಾಗ, ಆದರ್ಶ, ಕೆಚ್ಚು, ಸ್ವಾಭಿಮಾನ ಮೊದಲಾದ ಆದರ್ಶಗುಣಗಳಿಂದ ಕೂಡಿರುವ ವ್ಯಕ್ತಿತ್ವವನ್ನು ಶೋಧಿಸಿ ಜಾತಿಯ ಸೋಂಕಿಲ್ಲದೆ ಮುಕ್ತವಾಗಿ ಪ್ರಶಂಸಿಸುವುದು ವೀರನಾಯಕರ ಗುಣಗಳಲ್ಲೊಂದೆಂಬುದನ್ನು ಅವರ ಬರಹಗಳೇ ಸೂಚಿಸುತ್ತವೆ. ವೀರನಾಯಕರಲ್ಲಿದ್ದ ಓದು-ಬರಹದ ದಾಹ ಇತರರಿಗೆ ಅನುಕರಣೀಯ ವಾದಂಥದ್ದು. ಅನೇಕ ಯುವ ಬರಹಗಾರರಿಗೆ ಪ್ರೋತ್ಸಾಹ-ಪ್ರೇರಣೆ ನೀಡಬಲ್ಲವರಾಗಿದ್ದರು. ಇತಿಹಾಸ ಪ್ರೇಮಿ ಟಿ.ಎನ್ .ಗಂಡುಗಲಿಯವರು ರಚಿಸಿದ ಕವನವನ್ನು 'ಬಿಚ್ಚುಗತ್ತಿ' ಪತ್ರಿಕೆಯಲ್ಲಿ ಪ್ರಕಟಿಸಿ ಅವರಿಗೆ 'ಕವಿಪಟ್ಟ' ನೀಡಿದವರು ವೀರನಾಯಕರೇ. ಇಂಥಾ ಹತ್ತಾರು ಉದಾಹರಣೆಗಳಿವೆ.

ವೀರನಾಯಕರು ಇಂದು ನಮ್ಮೆಲ್ಲರ ನೆನಪಿನಲ್ಲಿ ಉಳಿಯಲು ಕಾರಣವೆಂದರೆ ಅವರಲ್ಲಿದ್ದ ಚರಿತ್ರೆ ಬಗೆಗಿನ ನಿಕಟತೆ. ಚರಿತ್ರೆ ರಚನೆಯಲ್ಲೆ ತೃಪ್ತಿಪಟ್ಟ ವ್ಯಕ್ತಿ ವೀರನಾಯಕ. ಚರಿತ್ರೆಯನ್ನು ವಾತ್ಸಲ್ಯದಿಂದ ಕಂಡ ವೀರನಾಯಕರು, 'ಇತಿಹಾಸಜ್ಞಶ್ರೀ' ಬಿರುದನ್ನು ಧರಿಸಿಕೊಂಡು ಸಂತೃಪ್ತಿ ಪಟ್ಟುಕೊಂಡ ಸಂಭಾವಿತ. ವೀರನಾಯಕರಿಗೆ ಬರವಣಿಗೆ ತುಂಬಾ ಪ್ರಿಯವಾಗಿದ್ದಂತೆಯೇ ಸತತ ಅಧ್ಯಯನವೂ ಪ್ರಿಯವಾದ ಕಾರ್ಯ ವಾಗಿದ್ದಿತು. ಬಿಡುವು ದೊರೆತಾಗಲೆಲ್ಲ ಇತಿಹಾಸ, ಸಾಹಿತ್ಯ, ಜಾನಪದ ಮೊದಲಾದ ವಿಷಯಗಳ ಬಗ್ಗೆ ಅಧ್ಯಯನ, ಚಿಂತನ-ಮಂಥನ, ಕ್ಷೇತ್ರಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದರು. ಹೆಚ್ .ದಯಾನಂದ ಅವರು ಹೇಳಿರುವಂತೆ, ವೀರನಾಯಕರು ತಮ್ಮ ಕೊನೆಯ ದಿನಗಳಲ್ಲೂ ಮುಂದೆ ತಾವು ರಚಿಸಬೇಕಿದ್ದ ಸಾಹಿತ್ಯಕೃತಿಯ ಬಗ್ಗೆ ತಮ್ಮ ಗಮನವನ್ನು ಕೇಂದ್ರೀಕರಿಸಿದ್ದರಂತೆ.

ಈ ಹಿಂದೆಯೇ ತಿಳಿಸಿರುವಂತೆ, ವೀರನಾಯಕರ ಮೇಲೆ ಅವರ ತಂದೆಯವರ ಪ್ರಭಾವವಿದ್ದುದು ಸ್ಪಷ್ಟ. ಇವರ ತಂದೆಯವರು ವೃತ್ತಿಯಿಂದ ಉಪಾಧ್ಯಾಯರು. ಅವರಿಗೆ ತಕ್ಕಹಾಗೆ ವೀರನಾಯಕರೂ ಬೆಳೆದರು. ವೀರನಾಯಕರಿಗೆ ಓದು-ಬರಹದ ಜಾಡು ಬಾಲ್ಯದಲ್ಲಿಯೇ ಕಂಡಿತ್ತು. ಇದನ್ನು ಗುರುತಿಸಿರುವ ಎಂ.ವಿ. ಚಿತ್ರಲಿಂಗಯ್ಯನವರು, " ತಂದೆ ಪ್ರಾಥಮಿಕ ಶಾಲಾ ಅಧ್ಯಾಪಕರಾಗಿದ್ದರು. ಇವರ ಸುಪುತ್ರನಾದ ವೀರನಾಯಕರಿಗೆ ಓದು-ಬರಹ, ಸಾಹಿತ್ಯಚಿಂತನೆ ಪ್ರಾರಂಭವಾಗಲು ಆ ಪಿತೃವರ್ಯರ ಸಾತ್ವಿಕಪ್ರಭೆಯೇ ಕಾರಣವಾಯಿತು"[೮] ಎಂದಿದ್ದಾರೆ.

ವೀರನಾಯಕರ ಬರಹದ ಗುಣಮಟ್ಟವನ್ನು ಅರಿತವರು ಇದು ಅಸಾಧಾರಣ ಅಭ್ಯಾಸದಿಂದ ಮಾತ್ರ ಸಾಧ್ಯವಾದೀತೆಂದು ಹೇಳಿರುವುದುಂಟು. "ನಮ್ಮ ನಿರೀಕ್ಷೆಗೆ ಮೀರಿ ಇತಿಹಾಸ ಮತ್ತು ಸಾಹಿತ್ಯದಲ್ಲಿ ಸಾಕಷ್ಟು ಬರವಣಿಗೆ ರೂಢಿಸಿಕೊಂಡಿದ್ದರೆಂಬುದು ತಿಳಿದುಕೊಂಡೆ"[೯] ಎಂದಿದ್ದಾರೆ ಬಿ.ತಿಪ್ಪಣ್ಣ ಮರಿಕುಂಟೆ. ಇತಿಹಾಸ ಸಂಶೋಧನೆಯ ಬಗ್ಗೆ ಹೆಚ್ಚೇನೂ ತಿಳಿದಿಲ್ಲದ ತಮ್ಮಂಥವರನ್ನು ಸಹಾ ವೀರನಾಯಕರು ಹತ್ತಿರ ಕೂಢಿಸಿಕೊಂಡು ಇತಿಹಾಸದ ಬಗ್ಗೆ ಸವಿವರವಾಗಿ ಹೇಳುತ್ತಿದ್ದರೆಂದು ಸ್ಮರಿಸಿದ್ದಾರೆ. ತನ್ನಂಥವನ ಬಗೆಗೂ ವೀರನಾಯಕರು ಅಪಾರ ಭರವಸೆಯನ್ನು ಇಟ್ಟುಕೊಂಡಿದ್ದು, ಸದಾ ಪ್ರೋತ್ಸಾಹದ ಮಾತುಗಳನ್ನಾಡುತ್ತಿದ್ದರೆಂದು

ಹೇಳಿದ್ದಾರೆ. ಲೇಖಕ-ಸಂಶೋಧಕ ಎಚ್.ಎಸ್.ಗೋಪಾಲರಾಯರು "ಶ್ರದ್ಧೆ ಮತ್ತು ನಿಷ್ಠೆಗಳಿಂದ ಕೆಲಸ ಮಾಡುವ ಉತ್ಸಾಹಿ ತರುಣರಿಗೆ ವೀರನಾಯಕರು ನೀಡುತ್ತಿದ್ದ ಪ್ರೋತ್ಸಾಹ ಅನುಕರಣೀಯ. ತರುಣರ ಬಗೆಗೆ ಅವರಿಗಿದ್ದ ಭರವಸೆ, ನಂಬಿಕೆಗಳು ಗಮನಾರ್ಹ" ಎಂದಿರುವರು.[೧೦]

ಆರಂಭದಲ್ಲಿ ವೀರನಾಯಕರು ಸೃಜನಶೀಲಸಾಹಿತ್ಯಕ್ಷೇತ್ರದಲ್ಲಿ ತೊಡಗಿಕೊಂಡಿದ್ದರೂ ಮುಂದೆ ಇತಿಹಾಸ ಅಧ್ಯಯನ-ಸಂಶೋಧನೆ-ಇತಿಹಾಸ ರಚನೆಯ ಹಾದಿಯಲ್ಲಿ ಮುಂದುವರೆದರು. ತಮ್ಮ ಎಲ್ಲ ಬರಹಗಳಲ್ಲೂ ಐತಿಹಾಸಿಕ ಸಂಗತಿಗಳನ್ನು ಕ್ರೋಢೀಕರಿಸಿ ನಿರೂಪಿಸಲು ಪ್ರಯತ್ನಿಸಿದರು. ತಮ್ಮ ಬರಹಗಳ ಮೂಲಕ ವೀರನಾಯಕರು ಪ್ರಾದೇಶಿಕ ಚಾರಿತ್ರಿಕ ವಲಯಕ್ಕೆ ಅಪಾರ ಸೇವೆ ಸಲ್ಲಿಸಿದರು. ನಾಯಕ ಸಂಸ್ಥಾನಿಕರು ಪ್ರಭಾವ ಬೀರಿದ ರಾಯದುರ್ಗ, ಬಳ್ಳಾರಿ, ತುಮಕೂರು, ಚಿತ್ರದುರ್ಗ ಮೊದಲಾದ ಪ್ರದೇಶಗಳಲ್ಲಿನ ಚಾರಿತ್ರಿಕ ಅಂಶಗಳನ್ನು ಸಂಗ್ರಹಿಸಿ ಕರಾರುವಾಕ್ಕಾಗಿ ಬರೆಯಲು ಪ್ರಯತ್ನಿಸಿದರು.

❑❑

**ಟಿಪ್ಪಣಿಗಳು**

೧. ಹರತಿಸಿರಿ, ಪು.೧೩೧೨

೨. ಇತಿಹಾಸಕಾರ ಹೆಚ್.ವಿ.ವೀರನಾಯಕ 'ಹರತಿ', ಪು.೯೪

೩. ಅದೇ, ಪು.೪೫

೪. ಅದೇ, ಪು.೧೭

೫. ಅದೇ, ಪು.೪೪

೬. ವಾಲ್ಮೀಕಿ ಸಂದೇಶ, ಮಾರ್ಚ್ ೧೯೮೪, ಪು.೨೩

೭. ಹರತಿಸಿರಿ, ಪು.೧೨೨೨-೧೨೨೩

೮. ವಾಲ್ಮೀಕಿ ಸಂದೇಶ, ಮಾರ್ಚ್ ೧೯೮೪, ಪು.೨೧

೯. ಅದೇ, ಪು.೧೭

೧೦. ಇತಿಹಾಸಕಾರ ಹೆಚ್.ವಿ.ವೀರನಾಯಕ 'ಹರತಿ', ಪು.೪೨

## ಪ್ರಾದೇಶಿಕಚರಿತ್ರೆಗೆ ವೀರನಾಯಕರ ಕೊಡುಗೆ

ಚರಿತ್ರೆಯೆಂಬುದು ಭಾರತದಂತಹ ಪರಿಸರದಲ್ಲಿ ಎಲ್ಲರಿಗೂ ಸರಳರೇಖಾತ್ಮಕವೆಂಬಂತೆ ತೋರಿಸಲಾಗುತ್ತದೆ. ಅಂದರೆ ಈವರೆಗೆ ಬರೆದ ಚರಿತ್ರೆಯ ಸಂಗತಿಗಳೆಲ್ಲವೂ ಸತ್ಯವೆಂಬಂತೆ ಸಿದ್ಧಪಡಿಸಲಾದ ಚರಿತ್ರೆಯು ಕೆಲವು ವರ್ಗ, ವರ್ಣ, ಜಾತಿಪ್ರೇರಿತ ಎಂಬುದಂತೂ ಈಗಾಗಲೇ ತಿಳಿದ ಸಂಗತಿ. ಆದರೆ ನಮ್ಮಲ್ಲಿ ಪ್ರಾದೇಶಿಕ ಚರಿತ್ರೆಯ ಕಡೆಗೆ ಗಮನ ಹರಿಸದೇ ನಿಜವಾದ ಚರಿತ್ರೆಯನ್ನು ಮರೆಮಾಚಲಾಗಿದೆಯೆಂಬುದು ತಿಳಿದ ಸಂಗತಿಯೇ. ಬಹುಮುಖ್ಯವಾಗಿ ಕರ್ನಾಟಕದಂತಹ ಪರಿಸರದಲ್ಲಿಯೂ ಇತಿಹಾಸವೆಂಬುದು ಕೇವಲ ರಾಜಮಹಾರಾಜರದ್ದೇ ಎಂಬುದನ್ನು ಈವರೆಗಿನ ಬರಹಗಾರರೂ ಬಿಂಬಿಸಿದ್ದಾರೆ.

ಆದರೆ ಈಚೆಗೆ ಇಂಥಾ ಹುನ್ನಾರಗಳನ್ನೆಲ್ಲಾ ಬದಿಗೆ ಸರಿಸಿ ನಿಜವಾದ ಚರಿತ್ರೆಯನ್ನು ಸ್ಥಳೀಯ ಅಥವಾ ಪ್ರಾದೇಶಿಕ ನೆಲೆಯ ಅಧ್ಯಯನಗಳಿಂದ ಸಿದ್ಧಪಡಿಸಲಾಗುತ್ತಿದೆ. ಅದರಲ್ಲಿಯೂ ಕೆಳಸ್ತರದ ಸಮಾಜದಿಂದ ಬಂದ ಅಧ್ಯಯನಕಾರರು ತಮ್ಮ ಸಂಸ್ಕೃತಿಯ, ಸಮುದಾಯದ ಇತಿಹಾಸವನ್ನು ಮುನ್ನೆಲೆಗೆ ತರುವ ಮುಖೇನ ಪ್ರಾದೇಶಿಕ ಚರಿತ್ರೆಯ ಮಹತ್ವವನ್ನು ಎತ್ತಿಹಿಡಿದರು. ಚಿತ್ರದುರ್ಗದಂಥಾ ಚರಿತ್ರಕೇಂದ್ರಿತ ಸ್ಥಳದಲ್ಲಿ ಇಂಥವರು ಸಾಕಷ್ಟು ಕೊಡುಗೆ ನೀಡಿದ್ದಾರೆ. ಅದರಲ್ಲಿ ಹುಲ್ಲೂರು ಶ್ರೀನಿವಾಸ ಜೋಯಿಸರು, ತ.ರಾ.ಸು, ಗಳಗನಾಥ ಮುಂತಾದವರಿದ್ದಾರೆ. ಹಾಗೆಯೇ, ಚಿತ್ರದುರ್ಗದ ಪ್ರಾದೇಶಿಕ ಚರಿತ್ರೆಯನ್ನು ತಮ್ಮ ಅಧ್ಯಯನ, ಬರಹಗಳಿಂದ ಜನಮನ ತಲುಪಿದವರಲ್ಲಿ ವೀರನಾಯಕರೂ ಪ್ರಮುಖರಾಗಿದ್ದಾರೆ.

ವೀರನಾಯಕರು ಪ್ರಾದೇಶಿಕ ಇತಿಹಾಸಕ್ಕೆ ಸಂಬಂಧಿಸಿದಂತೆ ವಿಪುಲ ಜ್ಞಾನವನ್ನು ಹೊಂದಿದ್ದರು. ಅದರಲ್ಲೂ ಕರ್ನಾಟಕದ ಪ್ರಭಾವಿ ನಾಯಕಮನೆತನಗಳಲ್ಲೊಂದಾದ ಚಿತ್ರದುರ್ಗ ಸಂಸ್ಥಾನ ಮತ್ತು ಆ ಪರಿಸರದ ಪಾಳೆಯಪಟ್ಟುಗಳ ಬಗ್ಗೆ ತಿಳಿದುಕೊಂಡಿದ್ದರು. ವಿಶೇಷವಾಗಿ ಬೇಡ ಅಥವಾ ನಾಯಕ ಜನಾಂಗದ ಅರಸರನ್ನು ಕುರಿತು ಇವರು ವ್ಯಾಪಕ ಸಂಶೋಧನೆ ಕೈಗೊಂಡರು. ಚಿತ್ರದುರ್ಗ ಮತ್ತಿತರ ಪಾಳೆಯಪಟ್ಟುಗಳ ಚರಿತ್ರೆಯ ವಿಚಾರವನ್ನು ವಿವರಿಸುವುದರೊಂದಿಗೆ ತಮ್ಮ ಇತಿಹಾಸಜ್ಞಾನವನ್ನು ಪರಿಚಯಿಸಿದುದು ವೀರನಾಯಕರ ಹೆಗ್ಗಳಿಕೆ.

ವೀರನಾಯಕರು ಪ್ರಾದೇಶಿಕ ಆಳರಸರ ಬಗ್ಗೆ ಅಧಿಕಾರವಾಣಿಯಿಂದ ಮಾತನಾಡಬಲ್ಲ ಸಾಮರ್ಥ್ಯ ಹೊಂದಿದ್ದರೆಂಬುದು ಅವರ ಸಮೀಪವರ್ತಿಗಳ ಮಾತಿನಿಂದ ಗ್ರಹಿಸಬಹುದು. ಸುರಪುರದ ನಾಯಕರು,

ರಾಯದುರ್ಗದ ನಾಯಕರು, ಕನಕಗಿರಿ ನಾಯಕರು, ಚಿತ್ರದುರ್ಗ ನಾಯಕರು, ಸಿರಾ ನಾಯಕರ ಬಗ್ಗೆ ಅವರಲ್ಲಿ ಅಪಾರ ಮಾಹಿತಿಯಿದ್ದಿತು. ವೀರನಾಯಕರು ಅದನ್ನು ಓದುಗರಿಗೆ ತಮ್ಮ ಕೃತಿಗಳ ಮೂಲಕ ತಲುಪಿಸಿದ್ದಾರೆ. ಇವರ ಬರಹಗಳ ಮೂಲಕವೇ ಪ್ರಾದೇಶಿಕ ಚರಿತ್ರೆಗೆ ಇವರು ನೀಡಿದ ಕಾಣಿಕೆಯನ್ನು ಗ್ರಹಿಸಬಹುದಾಗಿದೆ.

ವೀರನಾಯಕರ ಬರಹಗಳಲ್ಲಿ 'ದುರ್ಗದ ಧವಳಕೀರ್ತಿ' ೧೯೮೧ರಲ್ಲಿ ಪ್ರಕಟಗೊಂಡಿತೆಂಬುದನ್ನು ಈಗಾಗಲೇ ಗಮನಿಸಲಾಗಿದೆ. ಇದು ಕಾದಂಬರಿ ಸ್ವರೂಪದ ಕೃತಿ; ಚಿತ್ರುದುರ್ಗ ಸಂಸ್ಥಾನವನ್ನು ಕುರಿತದ್ದು. ಅಲ್ಲಿನ ನಾಯಕ ಅರಸುಗಳು, ಅವರ ಆಳ್ವಿಕೆ, ಯುದ್ಧ ಮೊದಲಾದವನ್ನು ರೋಚಕಶೈಲಿಯಲ್ಲಿ ಬರೆದಿದ್ದಾರೆ ವೀರನಾಯಕರು. ರಾಜ್ಯಭಾರ ಮಾಡುವಲ್ಲಿ, ಆಡಳಿತ ನಡೆಸುವಲ್ಲಿ, ಶೌರ್ಯತನದಲ್ಲಿ ಕನ್ನಡಿಗರು ಯಾರಿಗೂ ಕಡಿಮೆಯಿಲ್ಲವೆಂಬುದನ್ನು ನಿರೂಪಿಸಿದ್ದಾರೆ. ಅಲ್ಲದೆ, ಈ ಕೃತಿಯು ಭಾವನಾತ್ಮಕ ನೆಲೆಯಲ್ಲಿ ಇನ್ನಷ್ಟು ಮೌಲಿಕ ಅಂಶಗಳನ್ನು ಒಳಗೊಂಡಿದೆಯೆನ್ನಬಹುದು. ನಾಡಿನ ಗತವೈಭವವನ್ನು ಸ್ಮರಿಸುವುದರೊಡನೆ ಸ್ಥಳೀಯರಲ್ಲಿ ಉತ್ಸಾಹ ಮತ್ತು ಅಭಿಮಾನಗಳನ್ನು ಉದ್ದೀಪಿಸುತ್ತದೆ. ಈ ಕಾದಂಬರಿಯ ಮೂಲಕ ಪ್ರಾದೇಶಿಕ ಚರಿತ್ರೆಯ ದರ್ಶನ ಮಾಡಿಸಿರುವುದು ವೀರನಾಯಕರ ಪ್ರಾದೇಶಿಕಪ್ರಜ್ಞೆಗೆ ನಿದರ್ಶನವಾಗಿದೆ.

'ಬಲೆಯಲ್ಲಿ ದುರ್ಗದ ಹುಲಿ' ಕೃತಿಯು 'ದುರ್ಗದ ಧವಳಕೀರ್ತಿ'ಯ ಎರಡನೇ ಭಾಗ. ಈ ಕೃತಿಯಲ್ಲಿ ಮತ್ತಿತಿಮ್ಮಣ್ಣನಾಯಕನು ವಿರೋಧಿಗಳ ಸಂಚಿನಿಂದ ಅವರ ಬಂಧಿಯಾಗುವ ಪ್ರಸಂಗವನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ ವೀರನಾಯಕರು.

ಪ್ರಾದೇಶಿಕ ಚರಿತ್ರೆಯನ್ನು ಅರುಹುವ ನಾಯಕರ ಬರಹಗಳಲ್ಲಿ 'ಕಣ್ಮರೆಯಾದ ಕನ್ನಡ ಕಲಿಕನಾಡು' ಎಂಬುದು ಮಹತ್ವದ ಕೃತಿ. ಸ್ಥಳೀಯವಾಗಿ ಆಡಳಿತ ನಡೆಸಿದರೂ ದಕ್ಷಿಣಭಾರತದಲ್ಲಿ ತಮ್ಮ ಸಾಮರ್ಥ್ಯವನ್ನು ಪ್ರಕಟಪಡಿಸಿ ಕೀರ್ತಿವಂತರೆನಿಸಿದ ನಾಯಕಮಣಿಗಳ ಕಥನವನ್ನು ವೀರನಾಯಕರು ನಿರೂಪಿಸುತ್ತಾರೆ. ಇಂತಹ ವೀರಾಗ್ರಣಿಗಳ ನಾಡು ಸ್ವಾರ್ಥಿಗಳ, ಕಪಟಿಗಳ, ವಿಶ್ವಾಸಘಾತಕರ ಒಳಸಂಚಿಗೆ ತುತ್ತಾಗಿ ನಾಶವಾಗಿ ಹೋಯಿತೆಂದು ಅವರು ಮನನೊಂದು ವ್ಯಕ್ತಪಡಿಸುತ್ತಾರೆ. ನಾವು ಅಸಾಮಾನ್ಯ ಪೀಳಿಗೆಯಿಂದ ಉದಯಿಸಿದ ವೀರರು; 'ನಾವು ಹೇಡಿಗಳ ರೀತಿ ಬದುಕುವುದು ಶ್ರೇಯಸ್ಕರವಲ್ಲ. ನಮ್ಮ ಹಿಂದಿನ ಪೂರ್ವಿಕರಂತೆ ವೀರತನದಿಂದ ಬಾಳಬೇಕು' ಎಂಬುದು ವೀರನಾಯಕರ ಚಿಂತನೆ. ಇವರ ಕೃತಿಗಳು ಕನ್ನಡಿಗರಲ್ಲಿ ಆತ್ಮ ವಿಶ್ವಾಸವನ್ನು ಜಾಗೃತಗೊಳಿಸುವ ನಿಟ್ಟಿನಲ್ಲಿ ಶ್ರಮಿಸುತ್ತವೆ.

ಸ್ಥಳೀಯ ಚರಿತ್ರೆಯನ್ನು ಆದ್ಯಂತವಾಗಿ ಅಧ್ಯಯನ ಮಾಡಿ, ಕೃತಿರೂಪದಲ್ಲಿ ವಿವರಿಸುವ ಹಂಬಲ ವೀರನಾಯಕರದು. ಅವರು ಕೃತಿಗಳನ್ನು ಮಾತ್ರ ಪ್ರಕಟಿಸದೆ, ಬಹುಜನರೊಂದಿಗೆ ಸಂವಹನಗೊಳ್ಳುವ ಪತ್ರಿಕೆಗಳಲ್ಲೂ ಪ್ರಾದೇಶಿಕ ಇತಿಹಾಸಕ್ಕೆ ಸಂಬಂಧಿಸಿದ ಹಲವಾರು ಲೇಖನಗಳನ್ನು ಬರೆದರು. ಅಲ್ಲದೆ, 'ಬಿಚ್ಚುಗತ್ತಿ'ಯೆಂಬ ತಮ್ಮದೇ ವಾರಪತ್ರಿಕೆಯನ್ನು ಬೆಂಗಳೂರಿನಲ್ಲಿ ಆರಂಭಿಸಿದರು. ಇದು ಮುದ್ರಣಗೊಳ್ಳ

ತ್ತಿದ್ದುದು ಅವರೇ ಸ್ಥಾಪಿಸಿದ ವಾಲ್ಮೀಕಿ ಪ್ರಿಂಟರ್ಸ್ ಎಂಬ ಪ್ರೆಸ್ಸಿನಲ್ಲಿ. ಪತ್ರಿಕೆಯ ಧ್ಯೇಯೋದ್ದೇಶ ಕುರಿತು 'ಬಿಚ್ಚುಗತ್ತಿ'ಯಲ್ಲಿ ಅವರು ವ್ಯಕ್ತಪಡಿಸಿರುವುದು ಹೀಗೆ : "ನಮ್ಮ ಪೂರ್ವಿಕರ ಇತಿಹಾಸ, ಜೀವನ, ಸಂಸ್ಕೃತಿ, ಕಲಿತನ, ವ್ಯಕ್ತಿಗಳ ಬಗ್ಗೆ ವಿಚಾರಪೂರಿತ ಲೇಖನಗಳ ಪ್ರಕಟನೆ ನಮ್ಮ ಮುಖ್ಯ ಉದ್ದೇಶವಾಗಿದೆ. ಈ ಬಗ್ಗೆ ಶಾಸನಗಳು, ಜಯರೇಖೆಗಳು, ಪುರಾತನ ಕಾಗದ-ಪತ್ರಗಳು, ತಾಳೆಗರಿ ಓಲೆಗಳು, ವೀರಗಲ್ಲುಗಳು, ಲಾವಣಿಗಳು, ಕೋಲಾಟಪದಗಳು, ಜಾನಪದಗಳು ಇತ್ಯಾದಿ ಆಧಾರಗಳಿಂದ ಸಂಗ್ರಹಿಸಿರುವ ಅತ್ಯಮೂಲ್ಯವಾದ ಇತಿಹಾಸ ಬೆಳಕು ಕಾಣಬೇಕಾಗಿದೆ. ಇಂದು ದೇಶದ ಭದ್ರತೆಗೆ ಯುವಕರ, ಮಕ್ಕಳ ಮನಃಪಟಲದಲ್ಲಿ ದೇಶಪ್ರೇಮಿಗಳ ಆದರ್ಶಜೀವನ ಅಚ್ಚೊತ್ತಬೇಕಾಗಿದೆ; ಮುಂದಿನ ಪೀಳಿಗೆಗೆ ಮಾರ್ಗದರ್ಶಿಯಾಗಬೇಕಾಗಿದೆ. History is a living process, by which we can understand ourselves to some extent by Jawaharlal Nehru in *Discovery of India.* ಈ ಸಂಚಿಕೆ(ವಿಶೇಷ ಸಂಚಿಕೆ) ಇಂತಹ ಮಹತ್ಕಾರ್ಯಕ್ಕೆ ದಾರಿದೀಪವಾಗಲೆಂದು ಇಚ್ಚಿಸಿದ್ದೇವೆ."[೧] ವೀರನಾಯಕರು ಕನ್ನಡಿಗರಲ್ಲಿ ಕನ್ನಡನಾಡಿನ ಐತಿಹಾಸಿಕಪ್ರಜ್ಞೆಯನ್ನು ಹೆಚ್ಚಿಸಲು ಈ ಪತ್ರಿಕೆಯ ಮೂಲಕ ಯತ್ನಿಸಿರುವುದು ಇಲ್ಲಿ ಕಂಡುಬರುತ್ತದೆ. ಜನಸಾಮಾನ್ಯರ ಅಭಿವ್ಯಕ್ತಿಗಳಾದ ಕೋಲಾಟಪದ, ಲಾವಣಿ, ಒಗಟು ಮೊದಲಾದವುಗಳಿಂದ ಅಮೂಲ್ಯ ಮಾಹಿತಿಯನ್ನು ಸಂಗ್ರಹಿಸಿ ಹೊರತೆಗೆದು ತಮ್ಮ ಪತ್ರಿಕೆಯ ಮೂಲಕ ಬಿತ್ತರಿಸಿದರು.

ವೀರನಾಯಕರು 'ಬಿಚ್ಚುಗತ್ತಿ' ಪತ್ರಿಕೆಯ ಸಲಹಾ ಮಂಡಲಿ ಅಧ್ಯಕ್ಷರಾಗಿದ್ದರು. ಕನ್ನಡದ ಬಗ್ಗೆ ಅಭಿಮಾನವುಳ್ಳಂಥ ವ್ಯಕ್ತಿಗಳನ್ನು ಆರಿಸಿ ಸಲಹಾ ಮಂಡಲಿಯ ಸದಸ್ಯರನ್ನಾಗಿಸಿದರು. ಬರಗೂರು ರಾಮಚಂದ್ರಪ್ಪ, ಟಿ.ಎನ್.ಗಂಡುಗಲಿ, ಜಿ.ಹೆಚ್. ಪ್ರಸಾದ್ ಮೊದಲಾದವರನ್ನು ಈ ಸದಸ್ಯರ ಪೈಕಿ ಇಲ್ಲಿ ಉದಾಹರಿಸಬಹುದು. 'ಬಿಚ್ಚುಗತ್ತಿ' ಪತ್ರಿಕೆಯಲ್ಲಿ ಪ್ರಾದೇಶಿಕ ವೀರನಾದ ಬಿಚ್ಚುಗತ್ತಿ ಭರಮಣ್ಣನಾಯಕನನ್ನು ಬಿಂಬಿಸಲು ಪ್ರಯತ್ನಿಸಲಾಗಿದೆ. ಪತ್ರಿಕೆಯ ಮೂಲೋದ್ದೇಶದ ಬಗ್ಗೆ ವೀರನಾಯಕರು ಪತ್ರಿಕೆಯಲ್ಲಿ ಈ ಘೋಷಣೆಯನ್ನು ಮುದ್ರಿಸಿದರು : "ಪೂರ್ವಿಕರ ಪೌರುಷದ ಇತಿಹಾಸಕ್ಕೆ ಮೀಸಲಾದ ಹಾಗೂ ವಿಚಾರಪೂರಿತ ರಾಜಕೀಯ ವಿಚಾರ ವಿಮರ್ಶೆಗಳಿಗೆ ಬಿಚ್ಚುಗತ್ತಿ(ಕನ್ನಡ ವಾರಪತ್ರಿಕೆ)"[೨] "ಪುರಾತನ ಸಂಸ್ಕೃತಿಯ ಪ್ರಚಾರ, ಪೂರ್ವಿಕರ ಪೌರುಷ ಇತಿಹಾಸ ಹಾಗೂ ಹಿಂದುಳಿದವರ್ಗಗಳ ಹಿತರಕ್ಷಣೆಗಾಗಿ ಮೀಸಲಾದ ಕನ್ನಡ ವಾರಪತ್ರಿಕೆ"[೩] ಎಂಬುದು ಇನ್ನೊಂದು ಘೋಷಣೆಯಾಗಿದ್ದಿತು.

ಇತಿಹಾಸ-ಸಂಸ್ಕೃತಿಗಳಿಗೆ ಆದ್ಯತೆ ನೀಡುವಮಟ್ಟಿಗೆ 'ಬಿಚ್ಚುಗತ್ತಿ'ಯನ್ನು ಬೆಳೆಸಲು ಉದ್ದೇಶಿಸಿದ ವೀರನಾಯಕರು, ಈ ನಿಟ್ಟಿನಲ್ಲಿ ಇತರರಿಗೂ ಪ್ರೇರಣೆಯಾದರು. ಇತಿಹಾಸಾಭಿಮಾನಿ ಟಿ.ಎನ್.ಗಂಡುಗಲಿ ಇವರಲ್ಲೊಬ್ಬರು. ವೀರನಾಯಕರ ಒಡನಾಟದಿಂದ ಹೇಗೆ ಉತ್ತೇಜಿತನಾದೆ ಎಂಬುದನ್ನು ಅವರು ಹೀಗೆ ಹೇಳುತ್ತಾರೆ : "ಅವರ ಒಡನಾಟದಿಂದ ಸಾಹಿತ್ಯ ಮತ್ತು ಪತ್ರಿಕೋದ್ಯಮಕ್ಷೇತ್ರಗಳಲಿದ್ದ ನನ್ನ ಆಸಕ್ತಿ ಅಭಿರುಚಿಗಳು ಇಮ್ಮಡಿಗೊಂಡವು. ರಾಜ್ಯಸಭಾ ಸದಸ್ಯರಾಗಿರುವ ಹೆಚ್.ಹನುಮಂತಪ್ಪನವರು ಪ್ರಕಾಶಕರಾಗಿದ್ದು, ತಿಪ್ಪೇಸ್ವಾಮಿ ಎಂಬುವವರು ಸಂಪಾದಿಸಿ ಚಿತ್ರದುರ್ಗದಿಂದ ಪ್ರಕಟಿಸುತ್ತಿದ್ದ 'ಮದಕರಿ' ಎಂಬ ಹೆಸರಿನ

ದಿನಪತ್ರಿಕೆಯನ್ನು ೧೯೭೩ರಲ್ಲಿ ನಾನು ಕೊಂಡಿದ್ದೆ. ಅದನ್ನು ಪುನರ್ ಪ್ರಾರಂಭಿಸಲು ಸೂಕ್ತ ಸಮಯದ ನಿರೀಕ್ಷೆಯಲ್ಲಿದ್ದೆ. ನನ್ನ ಧೋರಣೆಗಳಿಗೆ ಇಂಬುಕೊಡುವ ವೀರನಾಯಕರೊಡನೆ ನನ್ನ ಆತ್ಮೀಯತೆಯನ್ನು ಬೆಳೆಸಿಕೊಂಡ ನಂತರ ನನ್ನ ಬಯಕೆ ಈಡೇರುವಂತಾಯಿತು. ಬಹುಶಃ ಅವರ ಒತ್ತಾಯ-ಒತ್ತಾಸೆಗಳಿಲ್ಲದೆ ಹೋಗಿದ್ದರೆ ನನ್ನ ಉದ್ದೇಶ ಅಷ್ಟುಬೇಗನೆ ಈಡೇರುತ್ತಿರಲಿಲ್ಲ ಎನ್ನಬಹುದು."[೪]

ವೀರನಾಯಕರ ಪ್ರೇರಣೆಯಿಂದ ಗಂಡುಗಲಿಯವರು ೨೦ ಡಿಸೆಂಬರ್ ೧೯೮೮ರಲ್ಲಿ 'ನಾಯಕಮಣಿ' ಎಂಬ ವಾರಪತ್ರಿಕೆಯನ್ನು ಆರಂಭಿಸಿದರು. ಇದಕ್ಕೆ ಮೊದಲಿದ್ದ ಹೆಸರು 'ಮದಕರಿ'. ಇದನ್ನು ಕೈಬಿಟ್ಟು ಹೊಸ ಆವೃತ್ತಿಗೆ 'ನಾಯಕಮಣಿ' ಎಂಬ ಹೆಸರಿಡುವಂತೆ ಸೂಚಿಸಿದವರು ವೀರನಾಯಕರೇ. 'ನಾಯಕಮಣಿ'ಯ ಪ್ರಥಮಸಂಚಿಕೆಗೆ ವೀರನಾಯಕರು ನೀಡಿದ ಸಂದೇಶವಿದು : "ಇತಿಹಾಸಪ್ರಸಿದ್ಧವಾದ ಚಿತ್ರದುರ್ಗದಿಂದ ಹೊರಬರುತ್ತಿರುವ ಈ ಪತ್ರಿಕೆಯಲ್ಲಿ ಇತಿಹಾಸಕ್ಕೆ ಸಂಬಂಧಪಟ್ಟ ಸಂಶೋಧನಾತ್ಮಕ ಲೇಖನಗಳಿಗೆ ಅಗ್ರಸ್ಥಾನವಿರುವುದೆಂಬ ಮಹದಾಶೆಯಿಂದ ಕೂಡಿ, ತಮ್ಮ ದಕ್ಷ ನೇತೃತ್ವದಲ್ಲಿ ಹೊರಬರಲಿರುವ 'ನಾಯಕಮಣಿ' ವಾರಪತ್ರಿಕೆಯು ಯಶಸ್ವಿಯಾಗಲೆಂದು ಹಾರೈಸುವೆ."[೫] ಪ್ರಾದೇಶಿಕಮಟ್ಟದಲ್ಲಿ ಇದನ್ನು ಬೆಳೆಸಲು ಮುಂದಾದ ವೀರನಾಯಕರು, ಈ ಪತ್ರಿಕೆಯ ಮುಖ್ಯ ಸಲಹೆಗಾರರಾಗಿದ್ದರು. ಪತ್ರಿಕೆಯಿರಲಿ, ಪ್ರಕಟಣೆಯಿರಲಿ, ಉಪನ್ಯಾಸವೇ ಆಗಿರಲಿ ಜನರಲ್ಲಿ ಚರಿತ್ರೆ-ಸಂಸ್ಕೃತಿಗಳ ಅಭಿಮಾನ ಹೆಚ್ಚಾಗಬೇಕೆಂಬುದೇ ವೀರನಾಯಕರ ಸಂಕಲ್ಪವಾಗಿದ್ದಿತು.

ವೀರನಾಯಕರು ಪ್ರಾದೇಶಿಕ ಚರಿತ್ರೆ ಸಂಶೋಧನೆಗೆ ಸಲ್ಲಿಸಿದ ಕೊಡುಗೆಗಳಲ್ಲಿ 'ಅರಕೆರೆಶಾಸನ'ದ ಶೋಧವು ಮುಖ್ಯವಾದದ್ದು. ಇದೊಂದು ತಾಮ್ರಶಾಸನ. ತಲಕಾಡಿನ ಗಂಗರಿಗೆ ಸೇರಿದ್ದು. ಇದು ಆದಿರಾಳು ಗ್ರಾಮದ ರೈತನಿಗೆ ತನ್ನ ಹೊಲದಲ್ಲಿ ದೊರೆತದ್ದು. ಇದನ್ನು ವೀರನಾಯಕರು ಸಂಗ್ರಹಿಸಿದ್ದರು. ಈ ಕುರಿತು ಪ್ರೊ.ಲಕ್ಷ್ಮಣ್ ತೆಲಗಾವಿಯವರು ವ್ಯಕ್ತಪಡಿಸಿರುವುದು ಹೀಗೆ : "ಶಕ ೫೩೦(ಕ್ರಿ.ಶ.೬೦೮)ರ ತಲಕಾಡು ಗಂಗವಂಶದ ಶ್ರೀವಿಕ್ರಮರಾಜನ ಅರಕೆರೆ ತಾಮ್ರಶಾಸನವನ್ನು ಮೊದಲಿಗೆ ಸಂಗ್ರಹಿಸಿದವರು ವೀರನಾಯಕರು. ಹಿರಿಯೂರು ತಾಲ್ಲೂಕು, ಐಮಂಗಲ ಹೋಬಳಿ, ಆದಿರಾಳು ಗ್ರಾಮದ ರೈತನೊಬ್ಬ ತನ್ನ ಜಮೀನಿನಲ್ಲಿ ನಟ್ಟು ತೆಗೆಯುವಾಗ ನೆಲದಲ್ಲಿ ಹೂತುಹೋಗಿದ್ದ ಈ ತಾಮ್ರಶಾಸನವು ಹೊರಬಂದಿತು. ವೀರನಾಯಕರು ಅಧ್ಯಯನಾರ್ಥ ಇದನ್ನು ಸಂಗ್ರಹಿಸಿದರು. ಇದು ೭.೭ ಅಂಗುಲ ಉದ್ದ, ೩.೫ ಅಂಗುಲ ಅಗಲವುಳ್ಳ ಐದು ತಾಮ್ರಪಟಗಳಿರುವ ಶಾಸನ. ಎಂಟು ಪಾರ್ಶ್ವಗಳಲ್ಲಿ ಮಾತ್ರ ಬರಹವಿದೆ. ಒಟ್ಟು ೫೦ ಪಂಕ್ತಿಗಳ ಶಾಸನಪಾಠವನ್ನು ಪ್ರಾಚೀನಕಾಲದ ಸುಂದರವಾದ ಕನ್ನಡಲಿಪಿಯಲ್ಲಿ ಕೊರೆಯಲಾಗಿದ್ದು, ದಾನದ ಫಲ ಮತ್ತು ಶಾಸನದ ನಾಲ್ಕು ಶ್ಲೋಕಗಳ ವಿನಾ ಉಳಿದ ಎಲ್ಲ ಭಾಗವೂ ಸಂಸ್ಕೃತ ಗದ್ಯದಲ್ಲಿದೆ. ಗಂಗಪ್ರಭುಗಳ ಲಾಂಛನವೆನಿಸಿದ ಮದಗಜದ ಮುದ್ರೆಯಿರುವ ಉಂಗುರಕ್ಕೆ ಬೆಸುಗೆ ಹಾಕುವುದರೊಡನೆ ಈ ಎಲ್ಲ ಪಟಗಳನ್ನು ಬಂಧಿಸಿದೆ. ಶ್ರೀವಿಕ್ರಮರಾಜನು ತನ್ನ ರಾಜ್ಯಾಭಿಷೇಕದ ಪ್ರಥಮವರ್ಷದ ಕಾರ್ತಿಕ ಪೌರ್ಣಿಮಾ

ಸೋಮವಾರ ರೋಹಿಣೀ ನಕ್ಷತ್ರದ ಚಂದ್ರಗ್ರಹಣ ಕಾಲದಲ್ಲಿ ಬಹ್ಮಧೇಯವಿಧಿಯಂತೆ ಕದಂಬಭುಕ್ತಿಯ ಶ್ರೀಪುರ ವಿಷಯದ ತಡಸೂರಕೆರೆ ಎಂಬ ಗ್ರಾಮವನ್ನು ಬ್ರಹ್ಮಕ್ರಿಯೆಯಲ್ಲಿ ನಿರತರಾದ ನಾಲ್ವರು ಬ್ರಾಹ್ಮಣರಿಗೆ ದಾನಮಾಡಿದನೆಂಬುದೇ ಇಲ್ಲಿಯ ಮುಖ್ಯ ವಿಷಯ."[೬] ಈ ಮಹತ್ವದ ಶಾಸನವು ವೀರನಾಯಕರ ವಶದಲ್ಲಿದ್ದುದನ್ನು ಅರಿತ 'ಇತಿಹಾಸ ಸಂಶೋಧನ ಪ್ರಸಕ್ತ' ಹುಲ್ಲೂರು ಶ್ರೀನಿವಾಸ ಜೋಯಿಸರು ಅದನ್ನು ನೋಡಲು ಬಯಸಿದಾಗ, ವೀರನಾಯಕರೇ ಚಿತ್ರದುರ್ಗಕ್ಕೆ ಹೋಗಿ ಅದನ್ನು ಅವರಿಗೆ ತಲುಪಿಸಿಬಂದರು. ಇದರಿಂದ ನಾಡಿನ ಇತಿಹಾಸಕಾರರಿಗಾದ ಲಾಭ ಅಷ್ಟಿಷ್ಟಲ್ಲ. ಜೋಯಿಸರು ಇದನ್ನು ಸರಿಯಾಗಿ ಅಧ್ಯಯನ ಮಾಡಿ, ಅತ್ಯುತ್ತಮ ಲೇಖನವನ್ನು ಸಿದ್ಧಪಡಿಸಿ ಬೆಂಗಳೂರಿನ 'ಶರಣಸಾಹಿತ್ಯ' ಮಾಸಪತ್ರಿಕೆಯಲ್ಲಿ ಪ್ರಕಟಿಸಿದರು. ಲೇಖನದಲ್ಲಿ ವೀರನಾಯಕರ ಔದಾರ್ಯವನ್ನು ಕೊಂಡಾಡಿದ್ದಾರಲ್ಲದೆ, ಅವರಲ್ಲಿದ್ದ ಇತಿಹಾಸಾಸಕ್ತಿಯನ್ನು ಮನಸಾರೆ ಮೆಚ್ಚಿದ್ದಾರೆ.

ವೀರನಾಯಕರು ಪ್ರಾದೇಶಿಕ ಚರಿತ್ರೆಗೆ ನೀಡಿರುವ ಕೊಡುಗೆಯಲ್ಲಿ ಹರ್ತಿಕೋಟೆಗ್ರಾಮದಲ್ಲಿನ ಪದ್ದ(ದ್ಮ)ಣ್ಣನಾಯಕನ ಸಮಾಧಿಶ್ಯೋಧವೂ ಒಂದು. ಹರ್ತಿಕೋಟೆಯ ಜನರು ಈ ಪದ್ದ(ದ್ಮ)ಣ್ಣನಾಯಕನ ಸಮಾಧಿ ಯನ್ನು ಹರ್ತಿನಾಯಕನ ಸಮಾಧಿ ಎಂದು ನಂಬಿದ್ದರು. ಈ ವಿಷಯದಲ್ಲಿ ಸಂದೇಹ ತಾಳಿದ ವೀರನಾಯಕರು ಜನರು ನಂಬಿರುವ ಹಾಗೆ ಅದು ಹರ್ತೀಶನಾಯಕನ ಸಮಾಧಿ ಅಲ್ಲ, ಅದು ಪದ್ದ(ದ್ಮ)ಣ್ಣ ನಾಯಕನ ಸಮಾಧಿಯೆಂಬುದನ್ನು ಧೃಡಪಡಿಸಿದರು.

ವೀರನಾಯಕರ ಇನ್ನೊಂದು ಅಮೂಲ್ಯ ಸಂಶೋಧನೆಯೆಂದರೆ, ಚಿತ್ರದುರ್ಗಸಂಸ್ಥಾನದ ಮೊದಲ ಅರಸ ಮತ್ತಿತಿಮ್ಮಣ್ಣನಾಯಕನ ಕಾಲಾವಧಿ ಕುರಿತದ್ದು. ಮತ್ತಿತಿಮ್ಮಣ್ಣನಾಯಕನ ಕಾಲಾವಧಿ ಕುರಿತು ಅವರು ಹೀಗೆ ಹೇಳುತ್ತಾರೆ : "ತಿಮ್ಮಣ್ಣನಾಯಕನು ಸಾಳ್ವರ ಕಾಲದಲ್ಲೂ ಇದ್ದು, ವಿಜಯನಗರದ ಮುಂದಿನ ತುಳುವರ ಕಾಲದಲ್ಲಿಯೂ ಇದ್ದನೆಂಬುದು ಸತ್ಯಸಂಗತಿ. ಅವನು ೧೪೮೬ರಲ್ಲಿ ಅಮರನಾಯಕನಾಗಿಯೂ ೧೫೦೭ರಲ್ಲಿ ವಿಜಯನಗರದ ಮೈತ್ರೇಯನಾಗಿಯು ೧೫೦೮ರಿಂದ ದುರ್ಗದ ಸ್ವತಂತ್ರ ಪ್ರಭುವಾಗಿದ್ದನೆಂಬುದು ಸ್ಪಷ್ಟ"[೭] ವೀರನಾಯಕರ ಈ ರೀತಿಯಾದ ವ್ಯಾಖ್ಯಾನಗಳು ಸಂಶೋಧಕರು ಮತ್ತು ಓದುಗರನ್ನು ಪುನರಾಲೋಚಿಸುವಂತೆ ಮಾಡಬಲ್ಲ ಗುಣದಿಂದ ಕೂಡಿವೆ. ವೀರನಾಯಕರು ಇತರ ಚರಿತ್ರಕಾರರ ನಿಲುವನ್ನು ಟೀಕಿಸಿರುವುದು ಹೀಗೆ: "ಚರಿತ್ರಕಾರರು ಈ ಪೂರ್ಣಾವಧಿಯನ್ನು ಇತಿಹಾಸದಿಂದ ಮರೆಮಾಡಿರುವಂತೆ ಕಾಣುತ್ತದೆ!"[೮]

'ಇತಿಹಾಸಪ್ರಸಿದ್ಧ ದಕ್ಷಿಣಕಾಶಿ ಎಂಬ ನಾಮಾಂಕಿತ ಹಿರಿಯೂರು ತೇರುಮಲ್ಲೇಶ್ವರ' ಎಂಬ ಬರಹವೊಂದನ್ನು ವೀರನಾಯಕರು ಪ್ರಕಟಿಸಿದ್ದಾರೆ. ಪ್ರಸಿದ್ಧವಾದಂಥ 'ಕಾಶಿ' ಧಾರ್ಮಿಕಸ್ಥಳವನ್ನು ಹಿರಿಯೂರಿಗೆ ಹೋಲಿಕೆ ಮಾಡಿ, ಅಷ್ಟೇ ಪವಿತ್ರವಾದ ಸ್ಥಳ ನಮ್ಮಲ್ಲಿದೆ ಎಂದು ಪ್ರಾದೇಶಿಕ ಮಹತ್ವವನ್ನು ಎತ್ತಿಹಿಡಿಯಲು ಪ್ರಯತ್ನಿಸಿದ್ದಾರೆ. ಈ ಲೇಖನವನ್ನು 'ನಾಯಕಮಣಿ'ಯು ಎರಡು ಕಂತಿನಲ್ಲಿ ಪ್ರಕಟಿಸಿತು. ಇದನ್ನು ಟಿ.ಎನ್ .ಗಂಡುಗಲಿಯವರ ಮಾತಿನಲ್ಲಿ ಕೇಳುವುದಾದರೆ, "ಇತಿಹಾಸಪ್ರಸಿದ್ಧ ದಕ್ಷಿಣಕಾಶಿ ಎಂಬ ನಾಮಾಂಕಿತ

ಹಿರಿಯೂರು ತೇರುಮಲ್ಲೇಶ್ವರ' ಎಂಬ ಅವರ ಲೇಖನವೊಂದನ್ನು ಪತ್ರಿಕೆಯ ದಿನಾಂಕ ೧೪-೨-೧೯೮೨ ಹಾಗೂ ೨೮-೨-೧೯೮೨ರ ಸಂಚಿಕೆಗಳಲ್ಲಿ ಎರಡು ಕಂತಿನಲ್ಲಿ ಪ್ರಕಟಿಸುವ ಅವಕಾಶ ಲಭ್ಯವಾಗಿತ್ತೆಂಬುದು ನನಗೆ ನೆಮ್ಮದಿಕೊಡುವ ಸಂಗತಿಯಾಗಿದೆ."[೯] ವೀರನಾಯಕರ ಲೇಖನಗಳನ್ನು ಪ್ರಕಟಿಸಲು ಪತ್ರಿಕೆಗಳು ಮುಂದಾಗಲು ಕಾರಣ, ಅವರಲ್ಲಿದ್ದ ಪ್ರಾದೇಶಿಕತೆಯ ಒಲವು; ಹಾಗೂ ಓದುಗರನ್ನು ಆಕರ್ಷಿಸುವ ಶೈಲಿಯಲ್ಲಿ ವಿಚಾರ ನಿರೂಪಣೆ.

ವೀರನಾಯಕರಿಗೆ ಪ್ರಾದೇಶಿಕ ಇತಿಹಾಸವನ್ನು ಬಿಂಬಿಸುವ ಅವಕಾಶ ಸಾಕಷ್ಟಿದ್ದಿತು. ಆ ಉದ್ದೇಶಕ್ಕಾಗಿ ಅವರು ನಾಟಕಗಳನ್ನು ರಚಿಸತೊಡಗಿದ್ದರು. ಹೀಗೆ ರಚಿತವಾದ ಐತಿಹಾಸಿಕ ನಾಟಕವೇ 'ದುರ್ಗದ ಸಿಂಹಿಣಿ ಓಬವ್ವ'. ಚಿತ್ರದುರ್ಗ ಸಂಸ್ಥಾನದ ಸಾಮಾನ್ಯ ಮನೆತನದ ಮಹಿಳೆಯ ಶೌರ್ಯ ಮತ್ತು ತ್ಯಾಗವನ್ನು ಚಿತ್ರಿಸುವಲ್ಲಿ ವೀರನಾಯಕರು ಶ್ರಮಿಸಿದ್ದಾರೆ. ಶತ್ರುಸೈನ್ಯವು ಚಿತ್ರದುರ್ಗ ಕೋಟೆಯೊಳಗೆ ಮೋಸದಿಂದ ನುಗ್ಗಲು ಪ್ರಯತ್ನಿಸಿದಾಗ, ಓಬವ್ವ ಎಂಬ ದಲಿತವರ್ಗದ ಮಹಿಳೆ ತನ್ನ ಒನಕೆಯಿಂದಲೇ ಶತ್ರುಗಳನ್ನು ಸಾಲಾಗಿ ಸಂಹರಿಸಿ ಪರಾಕ್ರಮ ತೋರಿದಳು. ಇದು ನಾಟಕದ ವಸ್ತು. ಆದರೆ ವೀರನಾಯಕರು ದಲಿತವರ್ಗದ ಮಹಿಳೆಯೋರ್ವಳ ಸೇವೆ ಕರ್ನಾಟಕ ಇತಿಹಾಸದಲ್ಲಿ ಎಷ್ಟೊಂದು ಮಹತ್ವ ಪಡೆದಿದೆಯೆಂಬುದನ್ನು ಸಮರ್ಥವಾಗಿ ತೋರಿಸುವ ಪ್ರಯತ್ನ ನಡೆಸಿದ್ದಾರೆ. ಪುರುಷರಂತೆ ಮಹಿಳೆಯರು ಸಹಾ ಚಿತ್ರದುರ್ಗದಲ್ಲಿ ಸಾಹಸ ತೋರಿದುದನ್ನು ನಿರೂಪಿಸುವುದರೊಡನೆ, ಪ್ರಾದೇಶಿಕ ಅಭಿಮಾನವನ್ನು ವ್ಯಕ್ತಪಡಿಸಲು ಈ ಅವಕಾಶವನ್ನು ಸದುಪಯೋಗಪಡಿಸಿಕೊಂಡಿದ್ದಾರೆ. ಈ ಪ್ರಾದೇಶಿಕ ನಾಟಕದ ಇನ್ನೊಂದು ವೈಶಿಷ್ಟ್ಯವೆಂದರೆ, ಇದನ್ನು ರಚಿಸಿದ ವೀರನಾಯಕರೇ ಇದರ ನಿರ್ದೇಶಕರೂ ಆಗಿದ್ದರು. ಇದನ್ನು ಪ್ರದರ್ಶನ ಮಾಡುವ ಪ್ರಯುಕ್ತ ವೀರನಾಯಕರು ಹರ್ತಿಕೋಟೆಯ ಯುವಕರನ್ನು ಸಂಘಟಿಸಿ ಅವರಿಗೆ ಉತ್ತಮ ಅಭಿನಯದ ತರಬೇತಿಯನ್ನು ನೀಡಿದ್ದರು. ಇದನ್ನು ಬೆಳಗೆರೆ ಕೃಷ್ಣಶಾಸ್ತ್ರಿಯವರು ಚೆನ್ನಾಗಿ ದಾಖಲಿಸಿದ್ದಾರೆ. ಅವರು ಬರೆದಿರುವಂತೆ, "ಚಳ್ಳಕೆರೆಯಲ್ಲಿ ನಡೆದ ಅಖಿಲ ಕರ್ನಾಟಕ ನಾಯಕ ಜನಾಂಗದ ಸಮ್ಮೇಳನದಲ್ಲಿ ಹರ್ತಿಕೋಟೆಯ ಯುವಕರು 'ಒನಕೆ ಓಬವ್ವ' ನಾಟಕವನ್ನು ಅಭಿನಯಿಸಿ ಸರ್ವರ ಮೆಚ್ಚುಗೆಯನ್ನು ಪಡೆದರು. ಆ ನಾಟಕವನ್ನು ರಚಿಸಿದವರು ಹಾಗೂ ನಿರ್ದೇಶಿಸಿದವರು ನಮ್ಮ ವೀರನಾಯಕರೇ ಎಂದು ತಿಳಿದಾಗಲಂತೂ ನನ್ನ ಸಂತೋಷಕ್ಕೆ ಪಾರವೇ ಇಲ್ಲದಂತಾಯಿತು."[೧೦]

ವೀರನಾಯಕರ ಪ್ರಾದೇಶಿಕ ಇತಿಹಾಸಪ್ರೇಮಕ್ಕೆ ಹಿಡಿದ ಕನ್ನಡಿಯಂತಿರುವುದೇ 'ಗುಮ್ಮನಳ್ಳಿ ಕದನ'. ಈ ಕೃತಿಯ ಹೆಸರೇ ಸೂಚಿಸುವಂತೆ ಗುಮ್ಮನಳ್ಳಿ ಎಂಬ ಪ್ರದೇಶದಲ್ಲಿ ನಡೆದ ಕಾಳಗದ ವಿಷಯವೇ ಇದರ ಕಥಾವಸ್ತು. ಇದೊಂದು ಮೌಖಿಕ ಚರಿತ್ರೆಯನ್ನು ಆಧರಿಸಿದ ಕೃತಿ; ಜನಪದ ವೀರಸಾಹಿತ್ಯದ ಸಾಲಿಗೆ ನಿಲ್ಲುವಂಥದ್ದು. ೧೭ನೇ ಶತಮಾನದ ಮೊದಲರ್ಧ ಭಾಗದಲ್ಲಿ ಘಟಿಸಿರಬಹುದಾದ ಘಟನೆಯನ್ನು ಈ ಜನಪದಕಾವ್ಯ ಚಿತ್ರಿಸುತ್ತದೆ. ಸಿರಾದ ರಂಗಪ್ಪನಾಯಕ ಮತ್ತು ಪುವ್ವಲ ಕೆಂಗಣ್ಣ ಎಂಬಿರ್ವರ ನಡುವಿನ ಅಂತರ್‌ಕಲಹವು ಗುಮ್ಮನಳ್ಳಿಯ ಬಳಿ ನಡೆದ ನಿರ್ಣಾಯಕ ಕಾಳಗಕ್ಕೆ ಇಂಬುಗೊಟ್ಟಿತು. ಇದರಲ್ಲಿ

ರಂಗಪ್ಪನಾಯಕನು ಬಿಜಾಪುರ ಸೇನಾಬಲದ ನೆರವಿನೊಡನೆ ಬಂದಿದ್ದ. ಆದರೆ ಪುಪ್ಪಲ ಕೆಂಗಣ್ಣನ ಪಡೆಯಿಂದ ಸಾವನ್ನಪ್ಪಿದ. ಈ ಕೃತಿಯಲ್ಲಿ ವೀರನಾಯಕರು ಪ್ರಸ್ತಾಪಿಸಿರುವ ವಿಶೇಷ ಸಂಗತಿಯೆಂದರೆ, ಕದನದಲ್ಲಿ ಪತನಹೊಂದಿದ ರಂಗಪ್ಪನಾಯಕನ ವಂಶಸ್ಥರು ಹರ್ತಿಕೋಟೆ, ವೇಣುಗಲ್ಲು, ರತ್ನಗಿರಿ, ಸುರಪುರ ಮೊದಲಾದ ಪ್ರದೇಶಗಳಲ್ಲಿ ನೆಲೆಯೂರಿ ಇಂದು ನೆಮ್ಮದಿಯ ಜೀವನ ಸಾಗಿಸುತ್ತಿದ್ದಾರೆಂಬುದು. ವಿಜಯನಗರ ಪತನ ಹೊಂದಿದಾಗ ಆ ಅರಸರ ರತ್ನಸಿಂಹಾಸನವನ್ನು ಪೆನುಗೊಂಡದಲ್ಲಿರಿಸಿ ರಕ್ಷಿಸಿದ್ದು ಈ ಸಿರಾದ ನಾಯಕ ವಂಶಸ್ಥರೆನ್ನುವುದನ್ನು ತಿಳಿಸುವುದರ ಮೂಲಕ ಪ್ರಾದೇಶಿಕ ಚರಿತ್ರೆಯ ಬಹುಮುಖ ಸಂಶೋಧನ ಅಂಶವೊಂದನ್ನು ಹೊರಗೆಡವಿದ್ದಾರೆ ವೀರನಾಯಕರು.

'ಗುಮ್ಮಳ್ಳಿ ಕದನ' ಕೃತಿಯು ಸಿರಾ ಪರಿಸರದ ಭೌಗೋಳಿಕ ಅಂಶಗಳನ್ನು ದಾಖಲಿಸಿಕೊಂಡಿದೆ. ಆಗಿನ ಸಿರಾಸೀಮೆಯು ಪೂರ್ವಕ್ಕೆ ರತ್ನಗಿರಿ, ನಿಡುಗಲ್ಲುಗಳನ್ನು ಒಳಗೊಂಡು ಮಡಕಸಿರಾದವರೆಗೂ ವಿಸ್ತರಿಸಿದ್ದಿತು. ಪಶ್ಚಿಮಕ್ಕೆ ಚಿತ್ರದುರ್ಗದ ಎಲ್ಲೆಯನ್ನು, ಉತ್ತರಕ್ಕೆ ಬಳ್ಳಾರಿ ಮತ್ತು ದಕ್ಷಿಣಕ್ಕೆ ಶ್ರೀರಂಗಪಟ್ಟಣ, ಬೆಂಗಳೂರು ಸೀಮೆಗಳನ್ನು ಗಡಿಯಾಗಿ ಹೊಂದಿತ್ತು. ಈ ಗಡಿಗಳ ನಡುವಿನ ಪ್ರದೇಶವು ಎರಡು ವಿಭಾಗಗಳಿಂದ ಗುರುತಿಸಲ್ಪಡುತ್ತಿದ್ದಿತು. ಅವುಗಳೆಂದರೆ, ೧. ಹರತಿ-ರತ್ನಗಿರಿಸೀಮೆ ಮತ್ತು ೨. ಹರತಿ-ನಿಡುಗಲ್ಲುಸೀಮೆ. ಸಿರಾದ ಪತನಾನಂತರ ರಂಗಪ್ಪನಾಯಕನ ವಂಶಸ್ಥರು ಕೊನೆಯವರೆಗೂ ರತ್ನಗಿರಿ ಮತ್ತು ನಿಡುಗಲ್ಲುಗಳನ್ನು ತಮ್ಮ ರಾಜಧಾನಿಗಳನ್ನಾಗಿ ಮಾಡಿಕೊಂಡು ಆಳಿದರಂತೆ. ಇಂಥಾ ಅನೇಕ ವಿಷಯಗಳನ್ನು ಒಳಗೊಂಡಿದೆ ಈ ಕೃತಿ.

'ಕ್ಷಾತ್ರಾಂಶ ಪ್ರಬೋಧ'ವು ವೀರನಾಯಕರ ಬರಹಗಳಲ್ಲಿ ಪ್ರಮುಖವೆನಿಸಿದ ಕೃತಿ. ಈ ಕೃತಿಯಲ್ಲಿ ಅವರು ಬೇಡ ಅಥವಾ ನಾಯಕಜನಾಂಗದ ಪೂರ್ವಚರಿತ್ರೆಯನ್ನು ವಿಸ್ತಾರವಾಗಿ ಬರೆದಿದ್ದಾರೆ. ಆ ಸಮುದಾಯದ ಹಲವು ದೋಷಗಳನ್ನೂ ಸೂಕ್ಷ್ಮವಾಗಿ ವಿವರಿಸಿದ್ದಾರೆ. ಪ್ರಾದೇಶಿಕವಾಗಿ ಬೇಡಜನಾಂಗ ನೆಲೆಸಿರುವ ಎಡೆಗಳು, ಅದರ ಪರಿಸ್ಥಿತಿ ಮೊದಲಾದ ಅಂಶಗಳನ್ನು ವ್ಯಕ್ತಪಡಿಸಿದ್ದಾರೆ. ದಕ್ಷಿಣಭಾರತದ ಹಿನ್ನೆಲೆಯಲ್ಲಿ ಸ್ಥಳೀಯ ಬೇಡ ಸಮುದಾಯಗಳ ಬಗ್ಗೆ ಪ್ರಸ್ತಾಪಿಸುವ ವೀರನಾಯಕರು, ರಾಜಕೀಯವಾಗಿ, ಸಾಮಾಜಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಪ್ರತ್ಯೇಕ ವಲಯಗಳನ್ನು ಸೃಷ್ಟಿಸಿಕೊಂಡು ಬಾಳಿದ ಈ ಸಮುದಾಯದವರ ಸೂಕ್ಷ್ಮ ಚಿತ್ರಣ ನೀಡಿರುವುದು ಉಪಯುಕ್ತವಾಗಿದೆ. ತಲಾತಲಾಂತರಗಳಿಂದಲೂ ಈ ಜನಾಂಗವು ರಾಜವರ್ಚಸ್ಸು, ರಾಜಠೀವಿ ಇತ್ಯಾದಿಗಳನ್ನು ಹೊಂದಿದ್ದರೂ ಇಂದು ಒಗ್ಗಟ್ಟಿನ ಕೊರತೆಯಿಂದ ಛಿದ್ರವಾಗಿದೆ. ಅಲ್ಲದೆ, ಈ ಜನಾಂಗಕ್ಕೆ ಉತ್ತಮ ಮಾರ್ಗದರ್ಶನ ಮಾಡಬಲ್ಲ ಸಮರ್ಥ ವ್ಯಕ್ತಿಗಳ ಅಭಾವವಿದೆ. ಪ್ರಾದೇಶಿಕ ಭಿನ್ನತೆಯನ್ನು ಚಿವುಟಿಹಾಕಿ ಭಾವೈಕ್ಯತೆಯನ್ನು ಸಾಧಿಸುವ ಬಗ್ಗೆ ಕರೆಕೊಡುತ್ತಾರೆ ವೀರನಾಯಕರು. 'ಕ್ಷಾತ್ರಾಂಶ ಪ್ರಬೋಧ' ಕೃತಿ ಕುರಿತು ಪ್ರೊ.ಲಕ್ಷ್ಮಣ್ ತೆಲಗಾವಿಯವರು ವ್ಯಾಖ್ಯಾನಿಸಿರುವುದು ಹೀಗೆ : "ಪುರಾಣಕಾಲದಿಂದ ಇಂದಿನವರೆಗೆ ವಿಕಾಸಗೊಂಡು ಪ್ರಗತಿಹೊಂದಿದ ಬೇಡಜನಾಂಗದವರ ಸೂಕ್ಷ್ಮನೋಟ ಇಲ್ಲಿದೆ. ಅವರ ಒಣ್ಣೆಲೆ, ವೈಶಿಷ್ಟ್ಯ ಇತ್ಯಾದಿಗಳನ್ನು ಯಥಾವತ್ತಾಗಿ ನಿರೂಪಿಸಿದೆ. ಪರಂಪರೆಯಿಂದ ಬಂದ ಈ ಜನಾಂಗದ

ಕ್ಷಾತ್ರತೇಜಸ್ಸಿನ ಬಗೆಗೆ ಹೆಮ್ಮೆ ಪಟ್ಟುಕೊಂಡರೂ ಒಗ್ಗಟ್ಟು ಮಾರ್ಗದರ್ಶನಗಳಿಲ್ಲದೆ, ಪ್ರಗತಿ-ಸುಧಾರಣೆಗಳತ್ತ ಗಮನವಿಲ್ಲದೆ ಸಂಕುಚಿತ ದೃಷ್ಟಿಯಿಂದ ನರಳುತ್ತಿರುವ ಪ್ರಸ್ತುತ ಸ್ಥಿತಿಗತಿಗಳ ವಿಚಾರದಲ್ಲಿ ವಿಷಾದ, ಕಳವಳ ಹಾಗೂ ಸಹಾನುಭೂತಿಗಳು ವ್ಯಕ್ತಪಟ್ಟಿವೆ. ಜನಾಂಗದ ಏಳಿಗೆಗಾಗಿ ಜನಾಂಗದವರು ಜಾಗೃತಗೊಂಡು ಸಂಘಟಿತರಾಗಿ ತಕ್ಕ ನಿರ್ಧಾರ ಕೈಗೊಳ್ಳುವಂತೆ ಕರೆಕೊಡುವ ಆತ್ಮೀಯ ಒತ್ತಾಯವಿದೆ. ಜನಾಂಗದ ಸರ್ವರಿಗೂ ತಿಳಿವಳಿಕೆ ನೀಡಿ ಆ ಮೂಲಕ ಅವರಲ್ಲಿಯ ಸ್ವಾಭಿಮಾನವನ್ನು ಕೆಣಕಿ, ಉದ್ರೇಕಿಸಿ ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ ಸ್ವಾವಲಂಬನೆಗೆ ಪ್ರಯತ್ನಿಸುವಲ್ಲಿ ಕಾರ್ಯೋನ್ಮುಖರಾಗುವಂತೆ ಮಾಡುವ ಪ್ರಚೋದನ ಶಕ್ತಿಯಿದೆ. ಚಾರಿತ್ರಿಕ ಹಿನ್ನೆಲೆಯನ್ನು ನಿರೂಪಿಸುವಲ್ಲಿ ಆದಷ್ಟು ಅಧಿಕೃತ ಮಾಹಿತಿಯನ್ನು ಅವಲಂಬಿಸಿರುವುದರಿಂದ ಈ ಪುಸ್ತಕಕ್ಕೆ ತನ್ನದೇ ಮಹತ್ವ ಪ್ರಾಪ್ತವಾಗಿದೆ.”[೧೧]

ವೀರನಾಯಕರು ಪ್ರಾದೇಶಿಕ ಮಟ್ಟದಿಂದಲೇ ತಮ್ಮ ಜನಾಂಗದಲ್ಲಿ ದೇಶಪ್ರೇಮವನ್ನು ಬಿತ್ತುವ ವ್ಯವಸ್ಥಿತ ಕ್ರಮ ಕೈಗೊಂಡವರು. ಸ್ವಾವಲಂಭನೆಗೆ ಅಗತ್ಯವಾದುದು ಸ್ವಾತಂತ್ರ್ಯ. ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ವಲಯಗಳ ಮೇಲಿನ ಹತೋಟಿಯಿಂದ ಅದನ್ನು ಸಾಧಿಸಬಹುದು ಎಂಬುದು ಅವರ ಕಾರ್ಯನೀತಿ. ಪ್ರಾದೇಶಿಕಪ್ರಜ್ಞೆಯಿಂದ ಇದನ್ನು ಯಾರಾದರೂ ಸಾಧಿಸಬಹುದೆಂಬುದು ಅವರ ಸಿದ್ಧಾಂತ. ತಮ್ಮ ಬರವಣಿಗೆಗಳ ಮೂಲಕ ಜನರಲ್ಲಿ ಈ ಬಗೆಯ ಅರಿವು ಮೂಡಿಸುವ ಬಗ್ಗೆ ಅವರು ಕ್ರಿಯಾಶೀಲರಾಗಿದ್ದುದು ಮೆಚ್ಚತಕ್ಕ ಅಂಶ.

೧೯೭೭ರಲ್ಲಿ ಮದಕರಿ ಜಯಂತಿಯ ಅಂಗವಾಗಿ ಚಿತ್ರದುರ್ಗದಲ್ಲಿ ಶ್ರೀಮುರುಘರಾಜೇಂದ್ರಸ್ವಾಮಿಯವರ ಅಧ್ಯಕ್ಷತೆಯಲ್ಲಿ ಸಮಾರಂಭವೊಂದನ್ನು ಏರ್ಪಡಿಸಲಾಗಿತ್ತು. ಅದರಲ್ಲಿ ವೀರನಾಯಕರು ಚಿತ್ರದುರ್ಗ ಸಂಸ್ಥಾನದ ಕಡೆಯ ಅರಸನಾದ ರಾಜಾ ವೀರಮದಕರಿನಾಯಕನನ್ನು ಕುರಿತು ಸುದೀರ್ಘ ಭಾಷಣ ಮಾಡಿದರು. ಆತನ ಶೌರ್ಯಗುಣ, ಯುದ್ಧಗಳಲ್ಲಿ ಆತ ತೋರಿದ ಪ್ರತಾಪ, ನಡವಳಿಕೆ ಮತ್ತು ದಿಟ್ಟತನ, ಗತ್ತುಗಾರಿಕೆಗಳನ್ನು ಹಲವಾರು ಆಧಾರಗಳ ಸಹಿತ ನಿರರ್ಗಳವಾಗಿ ವಿವರಿಸಿದರು. ಪ್ರಜ್ಞಾವಂತಿಕೆಯ ನೆಲೆಯಲ್ಲಿ ಸಾಧಿಸಲಾದ ಸ್ಥಳೀಯ ಜ್ಞಾನ, ತಿಳುವಳಿಕೆ, ಅಭಿಮಾನಗಳ ಬಲದಿಂದಷ್ಟೆ ನಿರೂಪಿಸಲು ಸಾಧ್ಯ. ಇದೇ ಸಂದರ್ಭದಲ್ಲಿ ವೀರನಾಯಕರು ಮದಕರಿನಾಯಕನನ್ನು ಕುರಿತು ತಾವೇ ರಚಿಸಿದ ಕೋಲಾಟದಪದವನ್ನು ತಾಳ-ಲಯಬದ್ಧವಾಗಿ ಗತ್ತಿನಿಂದ ಹಾಡಿ ಸಭೆಯನ್ನು ರಂಜಿಸಿದರಂತೆ.

ರಾಜ್ಯ ಹಾಗೂ ಜಿಲ್ಲಾಮಟ್ಟದ ನಾಯಕಜನಾಂಗದ ಸಮ್ಮೇಳನಗಳಲ್ಲಿ. ಬೇಡ ಸಮುದಾಯದಲ್ಲಿ ಸ್ಥಳೀಯಪ್ರಜ್ಞೆಯನ್ನು ಮೂಡಿಸಲು ವೀರನಾಯಕರೂ ಪ್ರಯತ್ನಿಸಿದರು. ಪ್ರಾದೇಶಿಕತೆಯೆಂಬುದು ಸಹಜವಾಗಿಯೇ ಭಾವೋದ್ವೇಗವನ್ನುಂಟು ಮಾಡುವಂಥದಾದ್ದರಿಂದ, ಜನ ಸಂಘಟನೆಯನ್ನು ವಿವೇಚನಾ ನೆಲೆಯಲ್ಲಿ ಮಾಡಬೇಕಾಗುತ್ತದೆ. ವೀರನಾಯಕರಲ್ಲಿ ಇದರ ಅರಿವಿದ್ದಿತು. ಸಮಕಾಲೀನ ಸಮಸ್ಯೆ-ಸವಾಲುಗಳಿಗೆ ಸ್ಪಂದಿಸುವ, ಎದುರಿಸುವ ನಿಟ್ಟಿನಲ್ಲಿ ಸಮುದಾಯದವರನ್ನು ಜಾಗೃತಿಗೊಳಿಸಲು ಅವರು ತಮ್ಮದೇ ವಿಧಾನಗಳನ್ನನುಸರಿಸಿದರು.

ಇತಿಹಾಸವೆಂಬುದು ಅವರಿಗೆ ಸಮರ್ಥ ಸಾಧನವಾಗಿ ದೊರೆಯಿತು. ಪುರಾಣ, ಐತಿಹ್ಯಗಳನ್ನು ಅವರು ತಮ್ಮ ಬರವಣಿಗೆಗಳಲ್ಲಿ ಬಳಸಿಕೊಂಡರು. ವಾಲ್ಮೀಕಿಯನ್ನು ಪ್ರಜ್ಞಾವಂತಿಕೆಯ ಪ್ರಬಲ ಸಂಕೇತವಾಗಿ ಕಂಡುಕೊಂಡು ಕಾರ್ಯಪ್ರವೃತ್ತರಾದುದು ಅವರ ಹೆಗ್ಗಳಿಕೆ. ಇಂಥಾದ್ದನ್ನು ಗಮನಿಸಿದ 'ಸದ್ಗುರು ನಿತ್ಯಾನಂದ ಪ್ರಸಾದಿತ' ರಂಗದಾಸರು, "ಇತಿಹಾಸಜ್ಞರಾದ 'ಶ್ರೀಮಾನ್ ಹೆಚ್.ವಿ.ವೀರನಾಯ್ಕ ಹರತಿ ಇವರು ವಾಲ್ಮೀಕಿ ಜನಾಂಗದ ಪುರೋಭಿವೃದ್ಧಿಗಾಗಿಯೇ ಈ ಜನಾಂಗದಲ್ಲಿ ಜನ್ಮಕ್ಕೆ ಬಂದಿರುವರೆಂಬ ಸಂತೋಷವು ನನಗಾಗುತ್ತಿದೆ."[೧೨] ಎಂದಿರುವುದುಂಟು.

ಮೈಸೂರು ನಾಯಕಜನಾಂಗದ ಪ್ರಥಮ ಸಮ್ಮೇಳನವು ೧೯೭೨ರಲ್ಲಿ ಬೆಂಗಳೂರಿನ ಪುಟ್ಟಣಚೆಟ್ಟಿ ಟೌನ್ ಹಾಲ್‌ನಲ್ಲಿ ಏರ್ಪಟ್ಟಿತು. ಅದರಲ್ಲಿ ವೀರನಾಯಕರು ಪ್ರತಿನಿಧಿಯಾಗಿ ಭಾಗವಹಿಸಿದ್ದರು. ಚಿತ್ರದುರ್ಗದ ನವಭಾರತ ತರುಣ ಕಲಾವಿದರ ಸಂಘವು 'ರಾಜಾ ವೀರಮದಕರಿನಾಯಕ' ಎಂಬ ನಾಟಕವನ್ನು ಮಾಸ್ಟರ್ ಹಿರಣ್ಯಯ್ಯ ಮಿತ್ರಮಂಡಳಿ ನಾಟಕಗೃಹದಲ್ಲಿ ಅಭಿನಯಿಸಿತು. ವೀರನಾಯಕರೇ ಆ ನಾಟಕ ಸಮಾರಂಭದ ಅಧ್ಯಕ್ಷಸ್ಥಾನವನ್ನು ವಹಿಸಿದ್ದರು. ಮತ್ತೊಂದು ನಾಯಕಜನಾಂಗದ ಸಮ್ಮೇಳನವನ್ನು ಅಕ್ಟೋಬರ್ ೧೯೮೦ರ ಮೊದಲನೇ ವಾರದಲ್ಲಿ ಬೆಳಗಾವಿಯಲ್ಲಿ ಏರ್ಪಡಿಸಲಾಗಿತ್ತು. ಇಲ್ಲಿ ವೀರನಾಯಕರು ಸನ್ಮಾನಿತ ಆಹ್ವಾನಿತ ರಾಗಿದ್ದರು. ಅವರು ಈ ಎಲ್ಲ ಕಾರ್ಯಕ್ರಮಗಳಲ್ಲಿ ಜನಾಂಗದ ಜಾಗೃತಿ ಕುರಿತು ನೀಡಿದ ಅಮೋಘವಾದ ಭಾಷಣಗಳು ಜನರ ಮೆಚ್ಚುಗೆಗೆ ಪಾತ್ರವಾದವು. ಅವರು ನಾಯಕ ಜನಾಂಗವನ್ನು ಪ್ರಾದೇಶಿಕವಾಗಿ ಸಮರ್ಪಕವಾಗಿ ಗುರುತಿಸಲೆತ್ನಿಸಿದರು. ಅವರು ಪಡೆದ ಇತಿಹಾಸದ ಬಗೆಗಿನ ಆಳವಾದ ಜ್ಞಾನ ಇಂತಹ ಸಮ್ಮೇಳನಗಳಲ್ಲಿ ಸ್ಫೋಟಗೊಳ್ಳುವಂತಿತ್ತು.

ವೀರನಾಯಕರು ಮಹಾತ್ಮಗಾಂಧಿಯವರ ವಿಚಾರಗಳನ್ನು, ತತ್ವಗಳನ್ನು ಪ್ರಾದೇಶಿಕಮಟ್ಟದಲ್ಲಿಯೂ ಬಿತ್ತರಿಸಲು ಪ್ರಯತ್ನಿಸುತ್ತಿದ್ದರು. ಮದ್ಯಪಾನ ನಿಷೇಧವನ್ನು ವೀರನಾಯಕರು ಬಲವಾಗಿ ಪ್ರತಿಪಾದಿಸುತ್ತಿದ್ದರು. ಈ ಪಾನನಿರೋಧದ ಪರವಾಗಿ ಹಳ್ಳಿ ಹಳ್ಳಿಗಳಲ್ಲಿ ಕೈಗೊಂಡ ಪ್ರವಾಸಗಳು ವೀರನಾಯಕರನ್ನು ಸ್ಥಳೀಯವಾಗಿ ಇನ್ನಷ್ಟು ಗಟ್ಟಿಗೊಳಿಸಿದವು. ಅವರು ಪಾನನಿರೋಧದ ಹಾಡುಗಳನ್ನು ರಚಿಸಿ, ಪ್ರಸಾರ ಮಾಡುವುದರ ಮೂಲಕ ಸ್ಥಳೀಯರ ಮನದಲ್ಲಿ ನೇರವಾಗಿ ಪ್ರವೇಶಿಸಿದರು.

ವೀರನಾಯಕರ ಹಿರಿಯ ಪುತ್ರ ಹೆಚ್.ವಿ.ವೀರೇಂದ್ರಸಿಂಹ ಅವರು ಹೇಳಿರುವಂತೆ, "ತಂದೆಯವರು ಮದ್ಯಪಾನದ ಕಡುವಿರೋಧಿಯಾಗಿದ್ದರು. ೧೯೬೧ರಲ್ಲಿ ನಮ್ಮ ಊರಲ್ಲಿ ಸೇವಾದಳವನ್ನು ಸಂಘಟಿಸಿ ಗಾಂಧೀಜಿ ಅವರ ಜೀವನಾದರ್ಶಗಳನ್ನು ಗ್ರಾಮೀಣ ಜನತೆಗೆ ಮನದಟ್ಟು ಮಾಡಿಕೊಟ್ಟಿದ್ದರು. ಆ ಸಂದರ್ಭದಲ್ಲಿ 'ಪಾನನಿರೋಧ-ಲಾವಣಿಗಳು ಮತ್ತು ಕೋಲಾಟದ ಪದಗಳು' ಪುಸ್ತಿಕೆಯನ್ನು ರಚಿಸಿ ಮದ್ಯಪಾನದಿಂದ ಉಂಟಾಗುವ ಕಷ್ಟನಷ್ಟಗಳನ್ನು ಹರತಿ ಕೋಲುಮೇಳದವರ ಮೂಲಕ ಪ್ರಚುರಪಡಿಸಿ, ಆಗಿನ ನಮ್ಮ ಸರಕಾರದ ಯೋಜನೆಯಲ್ಲಿ ತಮ್ಮ ಅಮೂಲ್ಯ ಸಹಕಾರವನ್ನು ನೀಡಿದ್ದರು. ಅವರು ರಚಿಸಿದ

ಲಾವಣಿ ಮತ್ತು ಕೋಲಾಟದ ಪದಗಳನ್ನು ೧೯೬೧ರಲ್ಲಿ ಹಿರಿಯೂರು ತಾಲ್ಲೂಕುಬೋರ್ಡ್ ಸಹಕಾರದೊಂದಿಗೆ ಹರ್ತಿಕೋಟೆಯ ಸೇವಾದಳ ಸಮಿತಿಯವರು ಸಂಗ್ರಹಿಸಿ ಪ್ರಕಟಿಸಿದ್ದಾರೆ. ತಂದೆಯವರು ಈ ಪ್ರತಿಗಳ ಮಾರಾಟದಿಂದ ಬರುವ ಆದಾಯವನ್ನು ಪ್ರಚಾರಕಾರ್ಯಕ್ಕೆ ಬಳಸಿಕೊಳ್ಳಲು ಬಿಟ್ಟುಕೊಟ್ಟರು."[೧೩]

ವೀರನಾಯಕರು ಚಿತ್ರದುರ್ಗದಂತಹ ಒಂದು ಮುಖ್ಯ ಚಾರಿತ್ರಿಕ ನೆಲೆಯನ್ನು ಕೇಂದ್ರವಾಗಿಟ್ಟುಕೊಂಡು, ಸ್ಥಳೀಯ ನಾಯಕ ಅರಸರ ಇತಿಹಾಸ, ಸಂಸ್ಕೃತಿ, ಹಾಡು, ಕಥನಗಳನ್ನು ಸಂಗ್ರಹಿಸಿದರು; ಸಮುದಾಯಕ್ಕೆ ತಲುಪಿಸಿದರು. ಆ ಮೂಲಕ ಸ್ಥಳೀಯ ಇತಿಹಾಸವನ್ನು ಜನಪ್ರಿಯಗೊಳಿಸುವ ಕೆಲಸವನ್ನು ವೀರನಾಯಕರು ಸಮರ್ಪಕವಾಗಿ ಮಾಡಿ ತೋರಿಸಿದರು.

❑❑

**ಟಿಪ್ಪಣಿಗಳು**

೧. ಹರತಿಸಿರಿ, ಪು.೧೨೧೪

೨. ಅದೇ, ಪು.೧೨೧೪

೩. ಅದೇ, ಪು.೧೨೧೩

೪. ಅದೇ, ಪು.೧೨೨೩-೧೨೨೪

೫. ಅದೇ, ಪು.೧೨೨೪

೬. ಇತಿಹಾಸಕಾರ ಹೆಚ್.ವಿ.ವೀರನಾಯಕ 'ಹರತಿ', ಪು.೪೭-೪೮

೭. ಅದೇ, ಪು.೪೧-೪೨

೮. ಅದೇ, ಪು.೪೨

೯. ಹರತಿಸಿರಿ, ಪು.೧೨೨೪

೧೦. ಅದೇ, ಪು.೧೨೦೨

೧೧. ಅದೇ, ಪು.೧೨೯೦

೧೨. ಅದೇ, ಪು.೧೨೮೪

೧೩. ಅದೇ, ಪು.೧೨೫೭

## ಅಧ್ಯಾಯ ೫

# ವೀರನಾಯಕರ ಸೇವಾಕ್ಷೇತ್ರಗಳು

೫.೧ ರಾಜಕೀಯಕ್ಷೇತ್ರ

೫.೨ ಸಾಮಾಜಿಕಕ್ಷೇತ್ರ

೫.೩ ಶೈಕ್ಷಣಿಕಕ್ಷೇತ್ರ

೫.೪ ಇತರ ಸೇವಾಕ್ಷೇತ್ರಗಳು

೫

# ವೀರನಾಯಕರ ಸೇವಾಕ್ಷೇತ್ರಗಳು

ವೀರನಾಯಕರು ಇತಿಹಾಸ ಸಂಶೋಧನ ಕ್ಷೇತ್ರದಲ್ಲಿ ತಮ್ಮನ್ನು ಗುರುತಿಸಿಕೊಂಡಂತೆ ಸಾಹಿತ್ಯಕ್ಷೇತ್ರದಲ್ಲೂ ಗುರುತಿಸಿಕೊಂಡಿರುವುದನ್ನು ಈಗಾಗಲೇ ನೋಡಿದ್ದೇವೆ. ಇವುಗಳೊಡನೆ ಅವರು ಇತರ ಸಾರ್ವಜನಿಕ ಕ್ಷೇತ್ರಗಳಲ್ಲಿಯೂ ಸೇವೆಸಲ್ಲಿಸಿರುವುದುಂಟು. ಮುಖ್ಯವಾಗಿ ರಾಜಕೀಯ, ಸಾಮಾಜಿಕ, ಶೈಕ್ಷಣಿಕಕ್ಷೇತ್ರಗಳಲ್ಲಿ ಅವರು ಗಮನಾರ್ಹ ಸೇವೆ ಸಲ್ಲಿಸಿ ಸಮಾಜದ ಕೃತಜ್ಞತೆಗೆ ಪಾತ್ರರೆನಿಸಿದ್ದಾರೆ. ಅವರು ಪ್ರವೇಶಿಸಿದ ಇಂಥಾ ಕ್ಷೇತ್ರಗಳ ಬಗ್ಗೆ ಇಲ್ಲಿ ಸ್ಥೂಲವಾಗಿಯಾದರೂ ಪ್ರಸ್ತಾಪಿಸಬಹುದು.

## ೫.೧ ರಾಜಕೀಯಕ್ಷೇತ್ರ

ಆರಂಭದಲ್ಲಿ ರಾಜಕೀಯದ ಬಗ್ಗೆ ಒಳ್ಳೆಯ ಅಭಿಪ್ರಾಯವಿರಿಸಿಕೊಂಡಿದ್ದ ವೀರನಾಯಕರು, ರಾಜಕೀಯ ಸಂಘಟನೆಗಳಲ್ಲಿ, ರಾಜಕೀಯ ನೆಲೆಯ ಸಂಘ-ಸಂಸ್ಥೆಗಳ ಕಾರ್ಯಕಲಾಪಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಮೊದಲಿನಿಂದಲೂ ಅವರು ಕಾಂಗ್ರೆಸ್ ಪಕ್ಷಕ್ಕಾಗಿ ದುಡಿದ ಜಿಲ್ಲಾಮಟ್ಟದ ಕಾಂಗ್ರೆಸ್ ಧುರೀಣರು. ಚಿತ್ರದುರ್ಗ ಜಿಲ್ಲೆಯ ಹೆಸರಾಂತ ರಾಜಕೀಯ ವ್ಯಕ್ತಿಗಳೊಡನೆ ಅನ್ಯೋನ್ಯ ಸಂಬಂಧವನ್ನು ಹೊಂದಿದ್ದವರು. ಮುಂದೊಮ್ಮೆ ತಮ್ಮ ನೆಚ್ಚಿನ ಪಕ್ಷವು ಎರಡು ಬಣಗಳಾಗಿ ರೂಪುಗೊಂಡಾಗ ವೀರನಾಯಕರ ಮನಸ್ಸು ನೊಂದಿತು. ರಾಜಕೀಯಕ್ಷೇತ್ರದಿಂದ ವಿಮುಖರಾಗಲು ಪ್ರಾರಂಭಿಸಿದುದು ಅಂದಿನಿಂದಲೇ. ವೀರನಾಯಕರ ಹಿರಿಯಪುತ್ರ ಹೆಚ್.ವಿ.ವೀರೇಂದ್ರಸಿಂಹರವರು ಹೇಳಿರುವಂತೆ, "ಪ್ರಾರಂಭದಲ್ಲಿ ತಂದೆಯವರು ಕಟ್ಟಾ ಕಾಂಗ್ರೆಸ್ಸಿಗರಾಗಿದ್ದರು. ಕಾಂಗ್ರೆಸ್ ಪಕ್ಷದ ಸಂಘಟನೆಗಾಗಿ ದುಡಿದಿದ್ದರು. ಕಾಂಗ್ರೆಸ್ ಮೊದಲಬಾರಿ ಇಬ್ಭಾಗವಾದಾಗಲೇ ಅವರು ರಾಜಕೀಯದ ನಂಟನ್ನು ಕಳೆದುಕೊಳ್ಳುತ್ತಾ ಬಂದರು. ಬರಬರುತ್ತಾ ಪೂರ್ಣ ತ್ಯಜಿಸಿ ಕೊನೆಯಲ್ಲಿ ಸಾಹಿತ್ಯದ ಕಡೆ ಹೆಚ್ಚಿನ ಗಮನ ಕೊಟ್ಟಿದ್ದರು. ಇತಿಹಾಸಲೇಖನ ರಚನೆ, ಸಂಶೋಧನೆ, ಅಧ್ಯಯನಗಳಲ್ಲಿ ಹೆಚ್ಚು ತೊಡಗಲಾರಂಭಿಸಿದರು."[೧]

### ಗ್ರಾಮೀಣ ರಾಜಕಾರಣದ ಮುತ್ಸದ್ದಿ

ಗ್ರಾಮೀಣ ವಲಯದ ರಾಜಕೀಯಕ್ಷೇತ್ರದಲ್ಲಿ ವೀರನಾಯಕರ ಕೊಡುಗೆ ಅಪಾರ. ವೀರನಾಯಕರು ಹರ್ತಿಕೋಟೆ ಗ್ರಾಮಪಂಚಾಯಿತಿಯ ಚೇರ್‌ಮನ್ನರೂ ಆಗಿದ್ದರು. ರಾಜಕೀಯಕ್ಷೇತ್ರದ ಆರಂಭಿಕ ಹಂತವಾದ ಗ್ರಾಮಪಂಚಾಯಿತಿಯಲ್ಲಿ ಇದ್ದುಕೊಂಡು ಇವರು ಹರ್ತಿಕೋಟೆಗೆ ಸಲ್ಲಿಸಿದ ಸೇವೆ ಗಣನೀಯವಾದದ್ದು.

ತಮ್ಮ ಅಧಿಕಾರಾವಧಿಯಲ್ಲಿ ಬಹುಕಾಲದಿಂದಲೂ ದುಸ್ಥಿತಿಯಲ್ಲಿದ್ದ ಊರಿನ ಬೃಹತ್ತಾದ ಎರಡು ಕಲ್ಯಾಣಿಗಳನ್ನು ಮುತುವರ್ಜಿ ವಹಿಸಿ ದುರಸ್ತಿಗೊಳಿಸಿದರು. ಬಾವಿಗಳ ಕಲ್ಲುಕಟ್ಟಡಗಳನ್ನು ಪುನಃ ಭದ್ರಪಡಿಸಿದರು. ಇವರು ಶುದ್ಧವಾದ ಕುಡಿಯುವ ನೀರಿನ ಬಗ್ಗೆ ಆದ್ಯಗಮನ ಹರಿಸಿ ಹರ್ತಿಕೋಟೆಗೆ ನೀರಿನ ಪೂರೈಕೆ ಸಮರ್ಪಕವಾಗಿರುವಂತೆ ಕ್ರಮ ಕೈಗೊಂಡರು. ಹರ್ತಿಕೋಟೆಯಲ್ಲಿ ರಸ್ತೆಗಳು ಹದಗೆಟ್ಟಿದ್ದವು. ಇದನ್ನು ಗಮನಿಸಿದ ವೀರನಾಯಕರು, ಅವುಗಳ ಸುಧಾರಣೆಗೆ ಕ್ರಮತೆಗೆದುಕೊಂಡು ಕಾರ್ಯೋನ್ಮುಖರಾದರು. ಉತ್ತಮಸ್ಥಿತಿಯಲ್ಲಿರುವ ರಸ್ತೆಗಳನ್ನು ಹರ್ತಿಕೋಟೆಯಲ್ಲಿ ಇಂದಿಗೂ ಕಾಣಬಹುದು. ರಾತ್ರಿಕಾಲದಲ್ಲಿ ಊರಿನಲ್ಲಿ ದೀಪಗಳಿರಲಿಲ್ಲ. ಇದನ್ನು ಗಮನಿಸಿದ ವೀರನಾಯಕರು, ತಮ್ಮ ರಾಜಕೀಯ ಪರಿಶ್ರಮದಿಂದ ಊರಿನಲ್ಲಿ ವಿದ್ಯುತ್‌ದೀಪಗಳು ಬೆಳಗುವಂತೆ ಮಾಡಿದರು. ಹರ್ತಿಕೋಟೆಯಲ್ಲಿ ನಡೆಯುವಂಥಾ ಜಾತ್ರೆಯಲ್ಲಿ ದನಕರುಗಳಿಗೆ ಸರಿಯಾಗಿ ನೀರು ದೊರೆಯದೆ ತೊಂದರೆಯಾಗುತ್ತಿದ್ದಿತು. ಇದರ ಕಡೆ ಲಕ್ಷ್ಯಕೊಟ್ಟ ವೀರನಾಯಕರು, ನೀರಿನ ಸರಬರಾಜು ಸರಿಯಾಗುವಂತೆ ಮಾಡಿ ಈ ಸಮಸ್ಯೆಯನ್ನು ನಿವಾರಿಸಿದರು. ಊರಿನಲ್ಲಿ ಸರಿಯಾಗಿ ಕಂದಾಯ ಪಾವತಿಯಾಗುತ್ತಿರಲಿಲ್ಲ. ಕಂದಾಯದ ಪ್ರಾಮಾಣಿಕ ವಸೂಲಿಯಲ್ಲಿ ತುಂಬಾ ಆಸ್ಥೆವಹಿಸಿ ಊರಿನ ಸಂಪನ್ಮೂಲ ಹೆಚ್ಚಾಗಲು ಕಾರಣರಾದರು ವೀರನಾಯಕರು.

ಹರ್ತಿಕೋಟೆ ಗ್ರಾಮಪಂಚಾಯ್ತಿಯ ಅಧ್ಯಕ್ಷ ಸ್ಥಾನದಲ್ಲಿದ್ದು ವೀರನಾಯಕರು ಸಲ್ಲಿಸಿದ ರಾಜಕೀಯ ಸೇವೆಯನ್ನು ಹೆಚ್.ವಿ.ವೀರಭದ್ರಯ್ಯನವರು ಹೀಗೆ ವರ್ಣಿಸುತ್ತಾರೆ : "ಶ್ರೀ ವೀರನಾಯ್ಕರು ಗ್ರಾಮಪಂಚಾಯತಿ ಅಧ್ಯಕ್ಷರಾಗಿಯೂ ಸೇವೆಸಲ್ಲಿಸಿದರು. ಗ್ರಾಮಕ್ಕೆ ಅಗತ್ಯವಾಗಿ ಆಗಬೇಕಾಗಿದ್ದ ಕೆಲಸಕಾರ್ಯಗಳನ್ನು ಮುತುವರ್ಜಿಯಿಂದ ಮಾಡಿಸಿದರು. ಕುಡಿಯುವ ನೀರಿನ ಸಮಸ್ಯೆಗೆ ಆದ್ಯಗಮನ ನೀಡಿದರು. ರಸ್ತೆ ಸಂಪರ್ಕವನ್ನು ಸುಧಾರಿಸಿದರು. ದೀಪದ ವ್ಯವಸ್ಥೆಯನ್ನು ಮಾಡಿದರು. ಜಾತ್ರೆಯಲ್ಲಿ ದನಕರುಗಳಿಗೆ ನೀರೊದಗಿಸಿದರು. ಕಂದಾಯದ ವಸೂಲಿಯಲ್ಲಿ ಆಸ್ಥೆವಹಿಸಿ ಸಂಪನ್ಮೂಲ ಹೆಚ್ಚಿಸಲು ಕಾರಣರಾದರು."[೨]

ವೀರನಾಯಕರು ಹರ್ತಿಕೋಟೆಯ ಗ್ರಾಮದೇವತೆಯಾದ ಶ್ರೀ ಆಂಜನೇಯಸ್ವಾಮಿ ದೇವಾಲಯದ ಕನ್ವೀನರ್ ಹುದ್ದೆಯಲ್ಲಿದ್ದುಕೊಂಡು ತಮ್ಮಿಂದಾದ ಸೇವೆಯನ್ನು ಮಾಡಿದ್ದಾರೆ. ದೇವಸ್ಥಾನದ ಪೂಜೆ-ಪುನಸ್ಕಾರಗಳು ಸರಿಯಾದ ವೇಳೆಗೆ ನಡೆಯುವಂತೆ, ದೇವಸ್ಥಾನಕ್ಕೆ ಸಂಬಂಧಿಸಿದ ಹಬ್ಬ-ಹರಿದಿನಗಳು ಸಕಾಲಕ್ಕೆ ಸಕ್ರಮವಾಗಿ ನೆರವೇರುವಂತೆ ನೋಡಿಕೊಳ್ಳುತ್ತಿದ್ದರು. ವೀರನಾಯಕರು ಕನ್ವೀನರ್ ಆಗಿದ್ದುದನ್ನು ಕಲಾವಿದ ಪಿ.ಆರ್.ತಿಪ್ಪೇಸ್ವಾಮಿಯವರು ವ್ಯಕ್ತಪಡಿಸಿರುವುದು ಹೀಗೆ : "ವೀರನಾಯ್ಕರು ಹಿಂದೊಮ್ಮೆ ಆಂಜನೇಯ ಸ್ವಾಮಿ ದೇವಾಲಯದ ಕನ್ವೀನರ್ ಆಗಿದ್ದರು. ಆಗ ಪಟೇಲಗಿರಿ ನನ್ನ ತಂದೆಯವರದು. ವೀರನಾಯಕರ ಬಗೆಗೆ ನನ್ನ ತಂದೆಯವರು ಪ್ರೀತಿವಾತ್ಸಲ್ಯ ತೋರುತ್ತಿದ್ದರು. 'ರುದ್ರೇಗೌಡರೇ' ಎಂದೇ ಪ್ರೀತಿಯಿಂದ ನಾಯಕರು ಅವರನ್ನು ಕರೆಯುತ್ತಿದ್ದರು. ಅವರ ಸಲಹೆಗಳನ್ನು ಪಡೆದು ದೇವರಕಾರ್ಯ ನಡೆಸುತ್ತಿದ್ದುದನ್ನು ನಾನು ಬಲ್ಲೆ."[೩]

ಒಮ್ಮೆಮ್ಮೆ ಊರಿನ ರಾಜಕೀಯದಲ್ಲಿ ಏರುಪೇರುಗಳುಂಟಾದ ಸಂದರ್ಭಗಳಲ್ಲಿ ವೀರನಾಯಕರು ತಮ್ಮ ಮುತ್ಸದ್ದಿತನದಿಂದ ಗ್ರಾಮದ ಶಾಂತಿಗೆ ಹಾನಿಯಾಗದ ಹಾಗೆ ನೋಡಿಕೊಳ್ಳುತ್ತಿದ್ದುದು ಅವರ ವಿಶೇಷ. ಊರಿನಲ್ಲಿ ಸಣ್ಣ ಪುಟ್ಟ ಘರ್ಷಣೆಗಳಾದಾಗಲೂ ಅಲ್ಲಿಯ ಹಿರಿಯರೊಂದಿಗೆ ಸಮಾಲೋಚನೆ ಮಾಡಿ, ಅಂಥಾ ಪ್ರಸಂಗಗಳಿಗಾಗಿ ಕೋರ್ಟು-ಕಛೇರಿಗಳ ಮೆಟ್ಟಿಲು ಹತ್ತುವ ಹವ್ಯಾಸ ಬೆಳೆಯದಂತೆ ನೋಡಿಕೊಳ್ಳುತ್ತಿದ್ದರು. ಗ್ರಾಮಪಂಚಾಯತಿ ಚುನಾವಣೆಗಳು ಬಂದರೆ ಸಾಮಾನ್ಯವಾಗಿ ಹಳ್ಳಿಗಳು ಸಣ್ಣಪುಟ್ಟ ಕುರುಕ್ಷೇತ್ರಗಳಾಗುವುದು ಎಲ್ಲರೂ ಬಲ್ಲ ಸಂಗತಿ. ಅಂಥಾ ಸಮಯದಲ್ಲಿ ಹರ್ತಿಕೋಟೆಯಲ್ಲಿಯೂ ಸಣ್ಣಪುಟ್ಟ ಜಗಳಗಳಾಗುತ್ತಿದ್ದುದುಂಟು. ಆದರೆ ಅವೆಂದೂ ಪ್ರಕೋಪಕ್ಕೆ ಹೋದುದಿಲ್ಲ. ಇದೆಲ್ಲದರ ಹಿಂದೆ ವೀರನಾಯಕರ, ಊರಿನ ಹಿರಿಯರ ಮುಂದಾಲೋಚನೆ ಇದ್ದೇ ಇರುತ್ತಿದ್ದಿತು.

ವೀರನಾಯಕರ ರಾಜಕೀಯ ಅಭಿರುಚಿ ಮತ್ತು ಪ್ರಜ್ಞೆಗಳನ್ನು ಕುರಿತು ಹಲವಾರು ಅಭಿಪ್ರಾಯಗಳುಂಟು. ಹರ್ತಿಕೋಟೆಯವರೇ ಆದ ಹೆಚ್.ವಿ.ವೀರಭದ್ರಯ್ಯನವರು ವೀರನಾಯಕರ ರಾಜಕೀಯಪ್ರಜ್ಞೆ ಕುರಿತು, “ರಾಜಕಾರಣದಲ್ಲಿಯೂ ಹಿಂದೆ ಬಿದ್ದಿಲ್ಲ ಎನ್ನುವಂತೆ ರಾಜಕೀಯಪ್ರಜ್ಞೆ ಬೆಳಸಿಕೊಂಡು, ಜಿಲ್ಲಾಮಟ್ಟದಲ್ಲಿ ಹೆಸರುಮಾಡಿ ಹರ್ತಿಕೋಟೆಯ ರಾಜಕೀಯ ಗಡಿಯನ್ನು ವಿಸ್ತರಿಸಿದವರು ಶ್ರೀ ವೀರನಾಯ್ಕರು”[೪] ಎಂದಿದ್ದಾರೆ.

ವೀರನಾಯಕರು ರಾಜಕೀಯರಂಗದಲ್ಲಿ ಹಲವಾರು ವರ್ಷಗಳ ಕಾಲ ಅನುಭವವುಳ್ಳಂಥಾ ಧುರೀಣರು. ಆದರೆ ಕ್ಷುಲ್ಲಕ ರಾಜಕೀಯ ಪ್ರವೃತ್ತಿಯಿಂದ ಇವರು ದೂರವಿದ್ದವರು. ಸಂದರ್ಭಕ್ಕೆ ತಕ್ಕಂತೆ ಮಾತನಾಡಿ, ಆ ನಂತರ ಆ ಮಾತನ್ನೆ ಮರೆತು ಬಿಡುವಂಥಾ ರಾಜಕೀಯ ಮುತ್ಸದ್ದಿ ಇವರಾಗಿರಲಿಲ್ಲ. ಚಿತ್ರದುರ್ಗ ಜಿಲ್ಲೆಯ ನಿಷ್ಠಾವಂತ ರಾಜಕೀಯಪಟು ಹೊ.ಚಿ.ಬೋರಯ್ಯನವರ ಪರವಾಗಿ ಚುನಾವಣಾ ಪ್ರಚಾರ ಮಾಡುವ ಮೊದಲೇ ಇವರು ರಾಜಕೀಯರಂಗದ ಎಲ್ಲ ಆಸೆ-ಆಮಿಷ, ಆಕಾಂಕ್ಷೆ-ಆಕರ್ಷಣೆಗಳಿಂದ ಬಹಳ ದೂರ ಉಳಿದಿದ್ದರು. ಹಾಗೆಯೇ, ರಾಜಕೀಯವಲಯವೆಂಬುದು ವೀರನಾಯಕರಂಥ ವ್ಯಕ್ತಿಗಳ ಜೀವನದಿಂದ ಬಹುದೂರ ಉಳಿದಿತ್ತು. ಟಿ.ಎನ್.ಗಂಡುಗಲಿಯವರು ಇದನ್ನು ತಮ್ಮ ಮಾತುಗಳಲ್ಲಿ ಈ ಮುಂದಿನಂತೆ ಬಹು ಚೆನ್ನಾಗಿ ನಿರೂಪಿಸಿದ್ದಾರೆ : “ಅವರಿಗೆ ೨-೩ ದಶಕಗಳ ಕಾಲದ ರಾಜಕೀಯ ಹಿನ್ನೆಲೆ ಹಾಗೂ ಅನುಭವಗಳಿದ್ದರೂ ಸಂಕುಚಿತದೃಷ್ಟಿಯ ರಾಜಕೀಯ ಮಾಡುವುದಾಗಲೀ ರಾಜಕಾರಣಿಗಳಂತೆ ವೇಷ ತಾಳು ವುದಾಗಲೀ ತಿಳಿದಿರಲಿಲ್ಲವೆನ್ನುವುದು ನನ್ನ ಅಭಿಪ್ರಾಯ. ೧೯೮೦ರ ವೇಳೆಗಾಗಲೇ ರಾಜಕೀಯಕ್ಷೇತ್ರದ ಎಲ್ಲಾ ಆಕರ್ಷಣೆಗಳಿಂದಲೂ ಅವರು ದೂರ ಸರಿದಿದ್ದರು. ಬೋರಯ್ಯ ಅವರಿಗಾಗಿ ರಾಜಕೀಯಕ್ಷೇತ್ರಕ್ಕೆ ಸೆಳೆಯಲ್ಪಟ್ಟಿದ್ದರೆ ವಿನಾ ಸ್ವಯಂ ಆಸಕ್ತಿಯಿಂದೇನಲ್ಲ. ಒಂದುಮಾತಿನಲ್ಲಿ ಹೇಳುವುದಾದರೆ, ಅವರ ವೈಯಕ್ತಿಕ ಪ್ರವೃತ್ತಿಗೂ ರಾಜಕೀಯ ಧೋರಣೆಗೂ ಅಜಗಜಾಂತರ ವ್ಯತ್ಯಾಸವಿದ್ದಿತು.”[೫]

ವೀರನಾಯಕರ ಭಾಷಣವು ಜನರ ಮೇಲೆ ಗಾಢವಾದ ಪರಿಣಾಮವನ್ನುಂಟು ಮಾಡುತ್ತಿತ್ತು. ಹೊ.ಚಿ.ಬೋರಯ್ಯನವರು ಸಹಾ ಆಗ ಸ್ಪರ್ಧಿಸಿದ್ದು ಕಾಂಗ್ರೆಸ್ ಪರವಾಗಿ, ಅಂದರೆ ಅರಸು(ದೇವರಾಜ್

ಅರಸ್) ಕಾಂಗ್ರೆಸ್ ಪರವಾಗಿ. ಇದು ಸ್ವಲ್ಪಮಟ್ಟಿಗೆ ಅವರು ಪುನಃ ರಾಜಕೀಯ ಪ್ರವೇಶ ಮಾಡಲು ಕಾರಣವಿರಬೇಕು. ಟಿ.ಎನ್.ಗಂಡುಗಲಿಯವರ ಈ ಮಾತುಗಳು ಇದನ್ನು ಸಮರ್ಥಿಸುತ್ತವೆ : "೧೯೮೦ ಜನವರಿಯಲ್ಲಿ ನಡೆದ ಪಾರ್ಲಿಮೆಂಟರಿ ಮಹಾಚುನಾವಣೆಗಳಲ್ಲಿ ಚಿತ್ರದುರ್ಗಕ್ಷೇತ್ರದಿಂದ ಆ ಜಿಲ್ಲೆಯ ಹೆಸರಾಂತ ರಾಜಕೀಯ ಮುಖಂಡರಾಗಿದ್ದ ದಿವಂಗತ ಹೊ.ಚಿ.ಬೋರಯ್ಯ ಅವರು ದೇವರಾಜ ಅರಸು ಪರವಾಗಿದ್ದು ಕಾಂಗ್ರೆಸ್ (ಅರಸು ಕಾಂಗ್ರೆಸ್) ಪಕ್ಷದ ಉಮೇದುವಾರರಾಗಿದ್ದರು. ಪರ-ವಿರೋಧಿ ಬಣಗಳಲ್ಲಿ ತೀವ್ರವಾದ ಚುನಾವಣಾ ಪ್ರಚಾರ ನಡೆಯುತ್ತಿರುವಾಗಲೆ ಚುನಾವಣೆಯ ದಿನಾಂಕಕ್ಕೆ ಸುಮಾರು ಹದಿನೈದು ದಿವಸಗಳ ಮೊದಲು ವೀರನಾಯಕರು ಮತ್ತು ನಾನು ಬೋರಯ್ಯನವರ ಪರವಾಗಿ ಪ್ರಚಾರಮಾಡಲು ನಿಯೋಜಿತರಾಗಿದ್ದೆವು. ಪ್ರಚಾರಕ್ಕೆ ಬಳಸಲಾದ ಕಾರಿನಲ್ಲಿ ಈರ್ವರೂ ಹಿರಿಯೂರು, ಚಳ್ಳಕೆರೆ, ಸಿರಾ, ಹೊಸದುರ್ಗ ತಾಲ್ಲೂಕುಗಳ ಬಹುಪಾಲು ಹಳ್ಳಿಗಳನ್ನು ಸುತ್ತಿದೆವು. ಮಂಜರಿ ಹನುಮಂತಪ್ಪ ಮತ್ತು ಟಿ.ಮಾರಪ್ಪ ಅವರೂ ಜೊತೆಗಿರುತ್ತಿದ್ದರು. ಒಂದೆಡೆ ರಾಜಕೀಯ ಚರ್ಚೆ ಹಾಗೂ ಪ್ರಚಾರವಾದರೆ, ಮತ್ತೊಂದೆಡೆ ಎಂದಿನಂತೆ ಇತಿಹಾಸ ಮತ್ತಿತರ ಸಂಗತಿಗಳ ವಿಚಾರ ವಿನಿಮಯ ನಮೀರ್ವರ ನಡುವೆ ಆಗುತ್ತಿದ್ದಿತು. ಈ ಅವಧಿಯಲ್ಲಿ ನಾನು ಗಮನಿಸಿದ ಮುಖ್ಯ ಸಂಗತಿಯೆಂದರೆ, ವೀರನಾಯಕರು ಉತ್ತಮ ವಾಗ್ಮಿಗಳಾಗಿದ್ದು, ವಿಚಾರ ಪ್ರಚೋದಕ ಭಾಷಣ ಮಾಡಬಲ್ಲವರಾಗಿದ್ದರು. ಜನಸಂಘಟನಾ ಸಾಮರ್ಥ್ಯ ಅವರಲ್ಲಿದ್ದಿತು."[೬]

ವೀರನಾಯಕರು ರಾಜಕೀಯ ಜೀವನವನ್ನು ಅಷ್ಟಾಗಿ ಇಷ್ಟಪಡುತ್ತಿರಲಿಲ್ಲ. ಇದಕ್ಕೆ ಇದ್ದಿರುವ ಕಾರಣಗಳು ಹಲವಾರು. ಇವೆಲ್ಲಾ ಏನೇ ಇದ್ದರೂ ಅವರ ಅಭಿರುಚಿಯು ಇತಿಹಾಸ ಸಂಶೋಧನೆ, ಸಾಹಿತ್ಯ, ಕಲೆ-ಇಂಥಾ ಬೌದ್ಧಿಕ ನೆಲೆಯ ಹಲವಾರು ಕ್ಷೇತ್ರಗಳಲ್ಲಿ ಹೆಚ್ಚು ಹೆಚ್ಚು ಬೆಳೆಯತೊಡಗಿದ್ದಿತು. ಆದರೂ ವೀರನಾಯಕರು ರಾಜಕೀಯರಂಗದ ನಂಟಿನೊಡನೆ ಗ್ರಾಮಮಟ್ಟದಲ್ಲಿ ಮಾಡಿದ ಸೇವೆ ಹರ್ತಿಕೋಟೆಯ ಇತಿಹಾಸದಲ್ಲಿ ಚಿರಸ್ಥಾಯಿಯಾಗಿರುತ್ತದೆ.

## ೫.೨ ಸಾಮಾಜಿಕಕ್ಷೇತ್ರ

ವೀರನಾಯಕರ ಸಾಮಾಜಿಕ ಕಾಳಜಿ ಕುರಿತು ಹೇಳುವ ಮುನ್ನ ಪ್ರೊ.ಲಕ್ಷ್ಮಣ್ ತೆಲಗಾವಿಯವರ ಮಾತುಗಳನ್ನು ಗಮನಿಸಬೇಕಾಗುತ್ತದೆ. ಅವರು ಹೇಳುವಂತೆ, "ಒಂದು ವರ್ಗದ ಇತಿಹಾಸವು ತನ್ನ ಸಂಬಂಧ ವನ್ನು ಸಮಾಜದ ಇನ್ನಿತರ ವರ್ಗಗಳೊಡನೆಯೂ ಹೊಂದಿರುತ್ತದೆಂಬುದನ್ನು ಅರಿಯಬೇಕು. ಈ ಬಗೆಯ ಅಂತರ್‌ಸೂಕ್ಷ್ಮಗಳನ್ನು ವಿಶದವಾಗಿ ತಿಳಿಯದೆ, ಬೇರ್ಪಡಿಸಿ ಅಧ್ಯಯನಗೊಳ್ಳದೆ 'ಜನಕೋಟಿ'ಯ ಇತಿಹಾಸ ಬರೆಯಬೇಕೆನ್ನುವ ಸಮಾಜವಿಜ್ಞಾನಿಗಳು ಹಾಗೂ ಇತಿಹಾಸಕಾರರನೇಕರ 'ಸ್ಲೋಗನ್' ಯಾವುದೋ ಮಿತಿಯಲ್ಲಿಯೇ ಉಸಿರಾಡುವಂತಾಗುತ್ತದೆ. ಭಾರತದ ಚರಿತ್ರೆಯ ಮಟ್ಟಿಗೆ, ಇಲ್ಲಿ ವರ್ಗ ಇತಿಹಾಸದ್ದೇ ಮೇಲುಗೈ. ವಿದ್ವತ್ಪ್ರಪಂಚದಲ್ಲಿ ಇನ್ನೂ ಪ್ರಕಾಶಕ್ಕೆ ಬಾರದಿರುವ ಹಲವಾರು ಜನಾಂಗಗಳನ್ನು ಚಾರಿತ್ರಿಕವಾಗಿಯೂ

ಅಭ್ಯಸಿಸಬೇಕಾಗಿದೆ. ಆ ನಿಟ್ಟಿನಲ್ಲಿ ಅವುಗಳ ಸ್ಥಾನ-ಮಾನಗಳನ್ನು ಗುರುತಿಸಬೇಕಾಗಿದೆ. ಈ ಎಲ್ಲದರ ಸಮಗ್ರ ಅಧ್ಯಯನ ಪೂರೈಸದ ಹೊರತು ಈ ದೇಶದ ಚರಿತ್ರಶಾಸ್ತ್ರದಿಂದ ಸಾಮಾನ್ಯರಿಗೆ ನ್ಯಾಯ ದೊರಕದು. ಈ ನಿಟ್ಟಿನಲ್ಲಿ ತಮ್ಮಮಟ್ಟಿನ ಕೆಲಸ ಮಾಡಿ ಇತರರಿಗೆ ಮಾರ್ಗದರ್ಶಕರೆನಿಸಿರುವ ವೀರನಾಯಕರು ಅಭಿನಂದನಾರ್ಹರು."[೭] ಈ ವ್ಯಾಖ್ಯಾನಕ್ಕನುಗುಣವಾಗಿ ಸಮಾಜದ ಒಂದು ವರ್ಗವು ಇನ್ನೊಂದು ವರ್ಗದೊಡನೆ ತನ್ನ ಅವಿನಾಭಾವ ಸಂಬಂಧವನ್ನು ಹೊಂದಿದೆ. ತಮ್ಮ ಜೀವನದಲ್ಲಿ ಇತರ ವರ್ಗಗಳೊಡನೆ ವೀರನಾಯಕರು ಇರಿಸಿಕೊಂಡಿದ್ದ ಆತ್ಮೀಯ ಸಂಬಂಧವನ್ನು ಈ ಹಿನ್ನೆಲೆಯಲ್ಲಿ ಗಮನಿಸಬಹುದು.

ವೀರನಾಯಕರು ಸಾಮಾಜಿಕ ನೆಲೆಯಲ್ಲಿ ಮೊಳಗಿಸಿದ್ದು ಬಂಡಾಯದ ಧ್ವನಿಯನ್ನು. ಸಾಮಾಜಿಕವಾಗಿ ತುಳಿತಕ್ಕೆ ಸಿಲುಕಿದ, ಅತಂತ್ರಕ್ಕೆ ಒಳಗಾದ ವರ್ಗಗಳ ಪರವಾಗಿ ಇವರಲ್ಲಿದ್ದ ಬಂಡಾಯಪ್ರಜ್ಞೆ ಸದಾ ಕೆಲಸ ಮಾಡುತ್ತಿತ್ತು. ಸ್ವತಃ ಬರಹಗಾರರಾದ ವೀರನಾಯಕರು, ಹರ್ತಿಕೋಟೆಯ ಅನೇಕ ಜನಗಳಲ್ಲಿ ಬಂಡಾಯದ ಬೆಳಕನ್ನು ಮೂಡಿಸಿದರು. ತಮ್ಮ ನಾಟಕಗಳ ಮೂಲಕ ಬಂಡಾಯ ಧ್ವನಿಗೆ ಪ್ರೋತ್ಸಾಹ ನೀಡಿದರು. ಹರ್ತಿಕೋಟೆಯಲ್ಲಿ ಬಲಿಷ್ಠರು ಅಸಹಾಯಕರ, ಮುಗ್ಧರ, ಬಡವರ ಮೇಲೆ ತಮ್ಮ ಬಲವಾದ ಹಿಡಿತವನ್ನು ಸಾಧಿಸುವ ಸಂದರ್ಭದಲ್ಲೇ ವೀರನ್ನಾಯಕರು ತಮ್ಮ ಸರಕಾರಿ ಹುದ್ದೆಗೆ ರಾಜಿನಾಮೆ ನೀಡಿ ಹರ್ತಿಕೋಟೆಗೆ ಬಂದಿಳಿದರು. ಬಲಿಷ್ಠರ ಶೋಷಣೆಯನ್ನು ಹಿಮ್ಮೆಟ್ಟಿಸಿ ಊರಿನಲ್ಲಿ ಶಾಂತಿ, ನೆಮ್ಮದಿ ನೆಲೆಯೂರುವಂತೆ ಮಾಡಿದರು. ಇವರು ಹರ್ತಿಕೋಟೆಗೆ ಬಂದಮೇಲೆ ಸಾಮಾಜಿಕವಾಗಿ ಎಲ್ಲ ವರ್ಗಗಳ ನಡುವೆ ಸಮಾನತೆ ಕಂಡುಬರಲು ಕಾರಣವಾಯಿತು. ಯುವ ಬರಹಗಾರ, ವಕೀಲ ಹೆಚ್.ದಯಾನಂದರು ವೀರನಾಯಕರಲ್ಲಿದ್ದ ಜಾತ್ಯತೀತ ಮನೋಭಾವನೆಯನ್ನು ಕುರಿತು ಈ ರೀತಿಯಾಗಿ ಹೇಳಿದ್ದಾರೆ : "ನಾಯಕ-ಪಂಚಮ-ಕುರುಬರನ್ನು ಒಂದೇ ಅಟ್ಟದ ಮೇಲೆ ತರಲು ಪ್ರಯತ್ನಿಸಿದ ನನ್ನೂರಿನ ಮೊದಲ ವ್ಯಕ್ತಿ. ಪಂಚಮರನ್ನು ಹೊಸಿಲಿನೊಳಗೆ ಮೊದಲು ಬಿಟ್ಟುಕೊಂಡ ಒಂದೇ ಕಾರಣಕ್ಕೆ ನಾನು ಇವರನ್ನು ಬಹಳಷ್ಟು ಗೌರವಿಸಿದ್ದು."[೮] ಅಂದರೆ ವೀರನಾಯಕರು ಅರ್ಧಶತಮಾನದ ಹಿಂದೆಯೇ ಬೇಡಜನಾಂಗದವರು, ಪಂಚಮರು, ಕುರುಬರು ಇವರೇ ಮೊದಲಾದ ಅಸ್ಪಶ್ಯ ಹಾಗೂ ಹಿಂದುಳಿದ ಜನಾಂಗದವರಿಗೆ ಸಮಾನ ಸ್ಥಾನ-ಮಾನಗಳನ್ನು ನೀಡಿ ಗೌರವಿಸುವ ಪ್ರಜ್ಞಾವಂತ ವ್ಯಕ್ತಿಯಾಗಿದ್ದರು. ಹರ್ತಿಕೋಟೆಯಲ್ಲಿ ದಲಿತಶಕ್ತಿಯ ಜ್ವಾಲೆಯನ್ನು ಹೊತ್ತಿಸಿದ ವೀರನಾಯಕರು, ಸಾಮಾಜಿಕವಾಗಿ ದಲಿತನಾಯಕರೇ ಆದರು; ವೈಚಾರಿಕವಾಗಿ ಇತರರಿಗಿಂತ ಪ್ರಬುದ್ಧರೆನಿಸಿದರು.

ಇತಿಹಾಸವನ್ನು, ಅದರಲ್ಲೂ ಕೆಳಸ್ತರದ ಇತಿಹಾಸವನ್ನು ಕೆದಕಿದ ವೀರನಾಯಕರಿಗೆ, ತಮ್ಮ ಬದುಕಿನ ಸಂದರ್ಭದಲ್ಲಿ ತಾರತಮ್ಯ ತೋರುತ್ತಿದ್ದ ಸಾಮಾಜಿಕ ಸಮಸ್ಯೆಗಳನ್ನು ಬಿಡಿಸುವಲ್ಲಿ, ಎದುರಿಸುವಲ್ಲಿ ನೆರವಿಗೆ ಬಂದದ್ದು ಅವರ ಕೌಟುಂಬಿಕ ಹಿನ್ನೆಲೆ ಮತ್ತು ಸಂಶೋಧನೆಯ ಪ್ರವೃತ್ತಿಗಳೆನ್ನಬೇಕಾಗುತ್ತದೆ. ಇತಿಹಾಸಕಾರ ವೀರನಾಯಕರು ತಮ್ಮ ಸಮಕಾಲೀನ ಸಾಮಾಜಿಕ ಪರಿಸ್ಥಿತಿಯನ್ನು ತಮ್ಮ ಬರಹಗಳ ಮೂಲಕವೂ ವಿಶ್ಲೇಷಿಸಿದ್ದಾರೆ. ಚರಿತ್ರೆಯ ಅಧ್ಯಯನವು ಅವರಲ್ಲಿ ಅಂಥಾ ದೃಷ್ಟಿಕೋನವನ್ನು ಬೆಳೆಸುವಲ್ಲಿ ಇನ್ನಷ್ಟು ಪ್ರೇರಣೆ ನೀಡಿದುದರಲ್ಲಿ ಅನುಮಾನವಿಲ್ಲ. ಪ್ರೊ.ಲಕ್ಷ್ಮಣ್ ತೆಲಗಾವಿಯವರು ಹೇಳಿದಂತೆ, "ಚರಿತ್ರೆಯ

ಅಧ್ಯಯನವು ಕಾಲಾಂತರದಲ್ಲಿ ಕಾಣಿಸಿಕೊಂಡು ಮಾಯವಾದ ಅಥವಾ ವಿಕಾಸಗೊಂಡ ಸಾಮಾಜಿಕ ಸ್ಥಿತಿ-ಗತಿಗಳ ದಾಖಲೆಯಾದುದರಿಂದ ಸಾಮಾಜಿಕಪ್ರಜ್ಞೆವುಳ್ಳವರಿಗೆ ಈ ಬಗೆಯ ಬದಲಾವಣೆಗಳನ್ನು ಗುರುತಿಸುವುದು ಅಷ್ಟು ಕಷ್ಟವೆನಿಸದು."[೯] ಈ ನಿಟ್ಟಿನಲ್ಲಿಯೇ ವೀರನಾಯಕರೂ ಯೋಚಿಸಿರುವರೆಂಬುದಕ್ಕೆ, ವಿಶ್ಲೇಷಿಸಿರುವರೆಂಬುದಕ್ಕೆ ಉದಾಹರಣೆಗಳು ಅವರ ಬರವಣಿಗೆಗಳಲ್ಲೆ ವಿಪುಲವಾಗಿ ದೊರೆಯುತ್ತವೆ. ಪ್ರೊ.ತೆಲಗಾವಿಯವರು ಇದನ್ನು ಹೀಗೆ ಗುರುತಿಸುತ್ತಾರೆ : "ಸಮಾಜದ ವಿವಿಧ ವರ್ಗಗಳು ಕಾಲಕ್ರಮೇಣ ಹೊಂದಿದ ಬದಲಾವಣೆಯನ್ನು, ಅದಕ್ಕೆ ಒದಗಿಬಂದ ಸಂದರ್ಭವನ್ನು ವೀರನಾಯಕರು ಸೂಕ್ಷ್ಮವಾಗಿಯೂ ಕೆದಕಿದ್ದಾರೆ. ಕೆಲವೊಮ್ಮೆ ಕಟುವಾಗಿ ವಿಮರ್ಶಿಸಿದ್ದಾರೆ."[೧೦] ಈ ದೃಷ್ಟಿಯಿಂದ, ಸಂಶೋಧಕ ವೀರನಾಯಕರಲ್ಲಿದ್ದ ಸಾಮಾಜಿಕ ತಿಳಿವಳಿಕೆಯ ಆಳ, ಸಾಮರ್ಥ್ಯ, ಜಾಣ್ಮೆ ಹಾಗೂ ವೈಯಕ್ತಿಕ ಧೋರಣೆಗಳನ್ನು ನಿಖರವಾಗಿ ಗುರುತಿಸಲು ಸಾಧ್ಯವಾಗುತ್ತದೆ. ವೀರನಾಯಕರಲ್ಲಿದ್ದುದು ಕೇವಲ ಪುಸ್ತಕಗಳ ಜ್ಞಾನವಲ್ಲ; ಬಹುತೇಕ ಸ್ವಯಂ ಅನುಭವಿಸಿದ ಹಾಗೂ ವೈಜ್ಞಾನಿಕ-ವೈಚಾರಿಕ ನೆಲೆಗಟ್ಟಿನ ಮೇಲೆ ಪರಿಶೀಲಿಸಿ ಕಂಡುಕೊಂಡ ಸತ್ಯ. ಅದನ್ನೇ ಅವರು ತಮ್ಮ ಬರಹಗಳಲ್ಲಿ ಸಮರ್ಥವಾಗಿ ವ್ಯಕ್ತಪಡಿಸಿರುವರು.



ಸಾಮಾಜಿಕ ಪ್ರಗತಿಗೆ, ಮೇಲ್ಮೆಗೆ ಕಾರಣೀಭೂತವಾಗುವಂಥಾ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದುದು ವೀರನಾಯಕರ ಹಿರಿಮೆಗೆ ಸಾಕ್ಷಿ. ಸಾಮಾಜಿಕವಾಗಿ ಕೆಳಸ್ತರದಲ್ಲಿರುವವರ ಬಗ್ಗೆ, ಬಡವರ ಬಗ್ಗೆ, ಮಾರ್ಗದರ್ಶನದ ಕೊರತೆಯಿರುವವರ ಬಗ್ಗೆ ವೀರನಾಯಕರಲ್ಲಿ ಅಪಾರ ಕಾಳಜಿಯಿದ್ದಿತು. ಗಾಂಧಿ, ಪೆರಿಯಾರ್, ಅಂಬೇಡ್ಕರ್‌ರಂಥಾ ಸಮಾಜವಿಜ್ಞಾನಿಗಳು ಹಾಗೂ ವಿಚಾರವಾದಿಗಳ ಪ್ರಭಾವಕ್ಕೆ ಒಳಪಟ್ಟಿದ್ದ ವೀರನಾಯಕರು, ಸಾಮಾಜಿಕವಾಗಿ ಕೆಳಗೆ ತಳ್ಳಲ್ಪಟ್ಟ ಸಮುದಾಯಗಳ ಪರವಾಗಿ ಕಾರ್ಯೋನ್ಮುಖರಾದುದು ಸಹಜ. ಮುಖ್ಯವಾಗಿ, ಹರಿಜನರ ಬಗ್ಗೆ ಅವರು ವಿಶೇಷವಾಗಿ ಗಮನಹರಿಸಿದ್ದರು. ಅವರ ಕೃತಿಯಲ್ಲಿ ಈ ಸಮುದಾಯದ ಹಿನ್ನೆಲೆ ದೊರೆಯುತ್ತದೆ. ಅವರು ಬರೆದಂತೆ, "ಉತ್ತರದಿಂದ ದಾಳಿಯಿಟ್ಟ ಆರ್ಯರಿಗೆ ಯುದ್ಧದಲ್ಲಿ ಸೆರೆಯಾಳುಗಳಾದ ದ್ರಾವಿಡರನೇಕರು, ಅವರ ಸೇವೆಯಲ್ಲಿಯೇ ನಿರ್ಬಂಧಿತರಾಗಿದ್ದುದರಿಂದ ಜನಾಂಗದಿಂದ ದೂರಿಕರಿಸಲ್ಪಟ್ಟು ಬಹಿಷ್ಕೃತರಾಗಿ ಅಸ್ಪೃಶ್ಯರಾದರು. ಇಂದು ಸಮಾಜದಲ್ಲಿ ಅಸ್ಪೃಶ್ಯರೆನಿಸಿಕೊಂಡಿರುವ ಆದಿದ್ರಾವಿಡ, ಆದಿಕರ್ನಾಟಕ ಜನಾಂಗದವರು ಬೇಡರ ಮೂಲಬುಡಕಟ್ಟಿಗೆ ಸೇರಿದವರು. ಈ ಎರಡೂ ಪಂಗಡದ ಹರಿಜನರು ಮೂಲನಾಯಕಜನಾಂಗಕ್ಕೆ ಸೇರಿದವರೇ ವಿನಃ ಅನ್ಯಥಾ ಅಲ್ಲ. ಈಗಲೂ ಈ ಜನಾಂಗದಲ್ಲಿರುವ ಗೋತ್ರಸೂತ್ರಗಳು ಒಂದೇ ಆಗಿದ್ದು, ತಂದೆ ಮಕ್ಕಳೆಂಬ ಭಾವನೆ ಇರುವುದೇ ಇದಕ್ಕೆ ಸಾದೃಶ್ಯವಾಗಿದೆ. ಯಾವುದೇ ಬಾಜಿನಲ್ಲಿಯೂ ಸಮಭಾಗವಿರುವ ಈ ಜನಾಂಗಗಳು ಬೇರೆ ಬೇರೆ ಎಂದು ಹೇಳುವುದು ಸಲ್ಲತಕ್ಕದ್ದಲ್ಲ. ಈ ಎರಡು ಜನಾಂಗದವರು ಒಂಬತ್ತನೇ ಪಣಕ್ಕೆ ಸೇರಿದವರೆಂದು ವಿದಿತವಿದೆ."[೧೧] ಜಾತೀಯತೆಯ ಅಡಿಪಾಯವಾಗಿರುವಂಥ ನಮ್ಮ ಭಾರತೀಯ ಸಮಾಜದಲ್ಲಿ ವೀರನಾಯಕರ ಈ ಮಾತುಗಳು ಇಂದಿಗೂ ಪ್ರಸ್ತುತವಾಗಿವೆ. ಇವರ ಸಾಮಾಜಿಕ ನಿಲುವು ಯುವಪೀಳಿಗೆಗೆ ಮಾರ್ಗದರ್ಶಿಯಂತಿದೆ.

ವೀರನಾಯಕರಿಗೆ ಪಂಚಮರ ಬಗ್ಗೆ ಅಪಾರ ಕಳಕಳಿಯಿತ್ತು. ತಮ್ಮ ಊರಿನ ಪಂಚಮ ಯುವಕರನ್ನು ಮುನ್ನೆಲೆಗೆ ತರಲು ಯತ್ನಿಸಿದರು. ಅವರ ಸ್ಥಿತಿಯನ್ನು ಸುಧಾರಿಸುವುದೇ ವೀರನಾಯಕರ ಉದ್ದೇಶವಾಗಿತ್ತು. ಈ ಕಾರಣಕ್ಕಾಗಿಯೇ ಹೆಚ್.ದಯಾನಂದ ಅವರು ವೀರನಾಯಕರಲ್ಲಿದ್ದ ದಲಿತಪ್ರಜ್ಞೆಯ ಬಗ್ಗೆ ಹೀಗೆ ಹೇಳಿದ್ದು: "ಹರಿದು ಹಂಚಿಹೋದ ನಾಯಕಜನಾಂಗಕ್ಕೆ ಹಾಗೂ ನನ್ನೂರಿನ ಪಂಚಮರ ಒಂದು ಗುಂಪಿಗೆ ತನ್ನನ್ನೇ ತಾನು ಅರ್ಪಿಸಿಕೊಂಡಾತ."[೧೨] ವೀರನಾಯಕರ ಈ ಪ್ರಯತ್ನವು ಸಾಮಾಜಿಕವಾಗಿ ಹಿಂದುಳಿದವರ ಪ್ರಗತಿಗೂ ನಾಂದಿಯಾಯಿತು. ನಾಯಕ ಜನಾಂಗದ ಜಾಗೃತಿಗೆ ಕಾರಣರಾದವರಲ್ಲಿ ವೀರನಾಯಕರೂ ಒಬ್ಬರು. ಪಂಚಮರ ಪ್ರಗತಿಗಾಗಿ ಶ್ರಮಿಸಿದ ವೀರನಾಯಕರ ಈ ಸಾಮಾಜಿಕ ಸೇವೆಯನ್ನು ಕಣ್ಣಾರೆ ಕಂಡ ಹೆಚ್.ದಯಾನಂದ ಅವರು ಅವರನ್ನು "ದಲಿತಪ್ರಜ್ಞೆಯ ಪಾಳೇಗಾರ"[೧೩] ಎಂದು ಕರೆದಿರುವುದು ಔಚಿತ್ಯಪೂರ್ಣವಾಗಿದೆ.

ಹರ್ತಿಕೋಟೆಯ ಅಬಲೆಯರು, ನಿರ್ಗತಿಕ ಹೆಣ್ಣುಮಕ್ಕಳು, ತೀರಾ ಕಷ್ಟದ ಜೀವನ ನಡೆಸುವ ಸ್ತ್ರೀಯರು ಇವರಿಗೆ ಜೀವನಮಟ್ಟ ಸುಧಾರಣೆಯ ಕೆಲವು ಮಾರ್ಗೋಪಾಯಗಳನ್ನು ಹಮ್ಮಿಕೊಂಡು ಅವುಗಳನ್ನು ಅನುಷ್ಠಾನಕ್ಕೆ ತರುವಲ್ಲಿ ಯಶಸ್ವಿಯಾದರು ವೀರನಾಯಕರು. ಈ ಕುರಿತು ಹೆಚ್ .ವಿ. ವೀರೇಂದ್ರಸಿಂಹರವರು, "ಆರ್ಥಿಕವಾಗಿ ಹಿಂದುಳಿದ ಹಾಗೂ ನಿರುದ್ಯೋಗಿ ಮಹಿಳೆಯರಿಗೆ ಸ್ವಉದ್ಯೋಗ ಕಲ್ಪಿಸುವ ಸಲುವಾಗಿ ಮಹಿಳಾಸಮಾಜಗಳಂಥ ಸಂಸ್ಥೆಗಳನ್ನು ಸ್ಥಾಪಿಸಿ ಬಡಮಹಿಳೆಯರಿಗೆ ಟೈಲರಿಂಗ್, ಕಸೂತಿ ಮುಂತಾದ ತರಬೇತಿಗಳನ್ನು ಕೊಡಲು ಏರ್ಪಾಡು ಮಾಡಿಸಿದ್ದರು. ಈ ಕೇಂದ್ರಗಳಲ್ಲಿ ಈಗಲೂ ಮಹಿಳೆಯರಿಗೆ ಹೊಲಿಗೆ ಕಸೂತಿ ಕಸುಬುಗಳಲ್ಲಿ ತರಬೇತಿ ಕೊಡಲಾಗುತ್ತಿದೆ. ಈ ಸಂಸ್ಥೆಯಿಂದ ತರಬೇತಿ ಪಡೆದ ಅನೇಕ ಮಹಿಳೆಯರು ಸ್ವಉದ್ಯೋಗ ಪ್ರಾರಂಭಿಸಿ ತಮ್ಮ ಕುಟುಂಬದ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸಿ ಕೊಂಡಿದ್ದಾರೆ"[೧೪] ಎಂದಿದ್ದಾರೆ. ಸಮಾಜಸೇವೆಯಲ್ಲಿ ವೀರನಾಯಕರು ಮಾತ್ರವೇ ಅಲ್ಲದೆ, ಅವರ ಕುಟುಂಬ ವರ್ಗದವರೂ ತೊಡಗಿಕೊಂಡಿದ್ದು ಗಮನಾರ್ಹ. ಉದಾಹರಣೆಗೆ, ವೀರನಾಯಕರ ಪುತ್ರಿ ಶ್ರೀಮತಿ ಜ್ಞಾನರತ್ನಮ್ಮ ಡಾ.ರಂಗಯ್ಯ ಅವರು ಇಂಥಾ ಮಹಿಳಾ ತರಬೇತಿ ಕೇಂದ್ರಕ್ಕೆ ಅಧ್ಯಕ್ಷಿಣಿಯಾಗಿಯೂ ಸೇವೆಸಲ್ಲಿಸಿದುದುಂಟು. ಅಮೇರಿಕಾದಲ್ಲಿ ನೆಲೆಸಿರುವ ಇವರು ಅಲ್ಲಿಂದಲೇ ಆರ್ಥಿಕ ಸಹಾಯವನ್ನೂ ಒದಗಿಸಿದುದುಂಟು. ಇಂಥಾ ವ್ಯವಸ್ಥೆಯಿಂದಾಗಿ ಹರ್ತಿಕೋಟೆಯಂಥಾ ಗ್ರಾಮದಲ್ಲಿ ಸಾಮಾನ್ಯ ಜನರ ಹಾಗೂ ಮಹಿಳೆಯರ ಜೀವನಮಟ್ಟ ಸ್ವಲ್ಪಮಟ್ಟಿಗಾದರೂ ಉತ್ತಮಗೊಳ್ಳಲು ಹಾಗೂ ಅವರ ಬದುಕಿನಲ್ಲಿ ಜಾಗೃತಿಮೂಡಲು ಸಾಧ್ಯವಾಯಿತೆನ್ನಬಹುದು. ಅಲ್ಲದೆ, ಆರ್ಥಿಕವಾಗಿ ಹಿಂದುಳಿದವರ ಏಳಿಗೆಗಾಗಿ ವೀರನಾಯಕರು 'ದೀನಸೇವಾ ಲೇಬರ್ ಸೊಸೈಟಿ'ಯನ್ನು ೧೯೬೨ರಲ್ಲಿ ಸ್ಥಾಪನೆ ಮಾಡಿದರು. ಆರ್ಥಿಕವಾಗಿ ದುರ್ಬಲರಾದ ಹಾಗೂ ಉದ್ಯೋಗರಹಿತ ಮಹಿಳೆಯರಿಗೆ ಇದರಿಂದ ಸಹಾಯವಾದುದು ವಾಸ್ತವ. ಮಹಿಳಾ ಸಮಾಜ ಸ್ಥಾಪನೆಗೊಂಡಿತು. ಸಮಾಜಕಲ್ಯಾಣ ಇಲಾಖೆ ಹಾಗೂ ಇತರ ಮೂಲಗಳಿಂದ ಪಡೆದುಕೊಂಡ ಸಹಾಯದಿಂದ ಹರ್ತಿಕೋಟೆಯಲ್ಲಿ ಮಕ್ಕಳಿಗಾಗಿ ಬಾಲವಾಡಿ ಸ್ಥಾಪನೆಗೊಂಡಿತು.

ವೀರನಾಯಕರು ತಮ್ಮಿಂದಾದ ಸೇವೆಯನ್ನು ಶೋಷಣೆಗೆ ಒಳಗಾದವರಿಗೆ, ನಿಶಕ್ತರಿಗೆ, ಮಹಿಳೆಯರಿಗೆ ಸಲ್ಲಿಸಿದರು. ಹಲವಾರು ಸೇವಾಸಂಸ್ಥೆಗಳಿಗೆ ಮಾರ್ಗದರ್ಶನ ಮಾಡಿದರು. ಚಿತ್ರದುರ್ಗ ಜಿಲ್ಲೆಯ ವ್ಯಾಪ್ತಿಗೆ ಬರುವ ಸಾರ್ವಜನಿಕ ಸಂಘಟನೆಗಳಲ್ಲಿ, ಬ್ಯಾಂಕುಗಳಲ್ಲಿ, ಸಹಕಾರಿ ಸಂಘ-ಸಂಸ್ಥೆಗಳಲ್ಲಿ ತೊಡಗಿಕೊಂಡಿದ್ದು, ಅವುಗಳ ಕಾರ್ಯಕಲಾಪಗಳಲ್ಲಿ ನಿರಂತರವಾಗಿ ಭಾಗವಹಿಸುತ್ತಿದ್ದರು. ವೀರನಾಯಕರ ಜ್ಞಾನಾನುಭವವು ಸಾಮಾಜಿಕ ಸೇವಾಕಾರ್ಯಗಳಲ್ಲಿ ಸದ್ವಿನಿಯೋಗವಾಯಿತೆಂಬುದೊಂದು ಮೆಚ್ಚತಕ್ಕ ಸಂಗತಿ.

ಊರಿನಲ್ಲಿ ಕೆಲವು ಯುವಕರಿಗೆ ಬ್ಯಾಂಡ್ ಬಾರಿಸುವ ಕಲೆಯಲ್ಲಿ ತರಬೇತಿ ಕೊಡಿಸಿದರು. ಇದರಿಂದ ಯುವಕರಿಗೂ ಕೆಲಸ ದೊರೆಯಿತು. ಅಲ್ಲದೆ, ಊರಿನ ಜನರು ಸಭೆ-ಸಮಾರಂಭಗಳಿಗೆ ಬ್ಯಾಂಡ್‌ಮೇಳವನ್ನು ಹುಡುಕುತ್ತಾ ಬೇರೆಡೆ ಅಲೆಯುವ ಪರಿಶ್ರಮ ತಪ್ಪಿತು.

'ಗ್ರಾಮಗಳ ಉದ್ಧಾರವೇ ದೇಶದ ಉದ್ಧಾರ' ಎಂಬ ಗಾಂಧೀಜಿಯ ಆಶೋತ್ತರಗಳನ್ನು ಅಕ್ಷರಶಃ ವೆಂಬಂತೆ ಪಾಲಿಸಿದವರು ವೀರನಾಯಕರು. ಅವರು ತಮ್ಮ ಸೇವೆಯನ್ನು ಆರಂಭಿಸಿದ್ದು ಗ್ರಾಮದಿಂದಲೇ, ಅದರಲ್ಲೂ ತಮ್ಮ ಸ್ವಗ್ರಾಮದಿಂಥ. ಗ್ರಾಮೀಣರ ಸರ್ವತೋಮುಖ ಅಭಿವೃದ್ಧಿಯ ಕಡೆ ಗಮನಹರಿಸಿದ ವೀರನಾಯಕರಂಥಾ ಧೀಮಂತ ವ್ಯಕ್ತಿಗಳಿಂದಲೇ ಸಮಾಜೋದ್ಧಾರ ಸಾಧ್ಯವೆಂಬುದು ಇಲ್ಲಿ ಸ್ಪಷ್ಟಪಡುತ್ತದೆ. ವೀರನಾಯಕರು ಎಂದೂ ತಮ್ಮ ವೈಯಕ್ತಿಕ ಕೆಲಸಕ್ಕೆ ಕೈಹಾಕದೆ ಸಮುದಾಯಕ್ಕೆ ತಮ್ಮ ಉದಾರ ನೆರವನ್ನು ನೀಡಿದವರು. ಆ ಮೂಲಕ ಗ್ರಾಮೋದ್ಧಾರ ಮಾಡಿದವರ ಸಾಲಿಗೆ ವೀರನಾಯಕರೂ ಸೇರಿದ್ದಾರೆನ್ನಬಹುದು. ಅವರೊಬ್ಬ ಸಮಾಜಜೀವಿಯೆಂಬುದನ್ನು ಮರೆಯಲಾಗದು.

## ೫.೩ ಶೈಕ್ಷಣಿಕಕ್ಷೇತ್ರ

ವೀರನಾಯಕರು ಶಿಕ್ಷಣಪ್ರೇಮಿಗಳು. ಸ್ವತಃ ಇವರ ತಂದೆಯವರೇ ಉಪಾಧ್ಯಾಯರಾಗಿದ್ದವರು. ಆದರೆ ವೀರನಾಯಕರು ತಮ್ಮ ವಿದ್ಯಾಭ್ಯಾಸವನ್ನು ಮುಂದುವರೆಸಿದುದು ಎಸ್.ಎಸ್.ಎಲ್.ಸಿ.ವರೆಗೆ ಮಾತ್ರ. ಮನೆಯ ಜವಾಬ್ದಾರಿ ಕಾರಣವಾಗಿ ಓದುವುದನ್ನು ಮುಂದುವರೆಸಲಿಲ್ಲ. ಆದರೆ ಓದುವವರಿಗೆ ಸದಾ ಪ್ರೋತ್ಸಾಹ, ಪ್ರೇರಣೆಗಳನ್ನು ನೀಡುತ್ತಾ ಅದಕ್ಕೆ ಬೇಕಾಗುವ ಸಕಲ ಅನುಕೂಲತೆಗಳನ್ನು ಒದಗಿಸುತ್ತಾ, ತಮ್ಮೊಳಗಣ ಶಿಕ್ಷಣಾರ್ಥಿಯನ್ನು ನಿರಂತರ ಜೀವಂತವಾಗಿರಿಸಿದ್ದರು.

ತಮ್ಮೂರಿನಲ್ಲಿನ ಶಾಲೆಯನ್ನು ವಿಸ್ತರಿಸುವ ಹಾಗೂ ವಿದ್ಯಾರ್ಥಿಗಳಿಗೆ ಹೆಚ್ಚಿನ ಅನುಕೂಲವನ್ನು ಮಾಡಿಕೊಡುವ ನಿಟ್ಟಿನಲ್ಲಿ ಗಮನಹರಿಸಿದವರು ವೀರನಾಯಕರು. ಹರ್ತಿಕೋಟೆಯ ಶಾಲೆಗೆ ಒಂದು ಹೊಸ ಕೊಠಡಿಯನ್ನು ಕಟ್ಟಿಸಿ ಸರ್ಕಾರಕ್ಕೆ ವಹಿಸಿಕೊಟ್ಟರು. ಹೆಚ್.ವಿ.ವೀರೇಂದ್ರಸಿಂಹರವರು ತಮ್ಮ ತಂದೆಯ ಸೇವೆಯನ್ನು ಕುರಿತು ಬರೆದಂತೆ, "ಕೆಲವಾರು ಶಿಕ್ಷಣ ಸಂಸ್ಥೆಗಳ ಸಂಸ್ಥಾಪಕ ಸದಸ್ಯರಾಗಿ ಶಿಕ್ಷಣಕ್ಷೇತ್ರದಲ್ಲೂ ದುಡಿದರು. ಶಿಕ್ಷಣಸಂಸ್ಥೆಗಳನ್ನು ಸ್ಥಾಪಿಸುವಲ್ಲಿ ಸಹಾಯಕರೂ ಮಾರ್ಗದರ್ಶಕರೂ ಆಗಿದ್ದರು. ನಮ್ಮೂರ ಮಾಧ್ಯಮಿಕಶಾಲೆಗೆ ನಮ್ಮ ತಾತಾ-ಅಜ್ಜಿಯರ ಸವಿನೆನಪಿಗೆ ಒಂದು ಕೊಠಡಿಯನ್ನು ಕಟ್ಟಿಸಿಕೊಟ್ಟಿದ್ದಾರೆ.

ಅಲ್ಲದೆ ಕೆಲವು ವರ್ಷಗಳು ಈ ಮಾಧ್ಯಮಿಕಶಾಲೆಯ 'ಬೆಟರ್‌ಮೆಂಟ್ ಕಮಿಟಿ'ಯ ಅಧ್ಯಕ್ಷರಾಗಿ ಸೇವೆಸಲ್ಲಿಸಿ ಶಾಲೆಯ ಅಭಿವೃದ್ಧಿಗಾಗಿ ದುಡಿದಿದ್ದಾರೆ.''[೧೫] ಶಿಕ್ಷಣಕ್ಷೇತ್ರದಲ್ಲಿ ವೀರನಾಯಕರು ಹೊಂದಿದ್ದ ಆಸಕ್ತಿಯ ಕಾರಣವಾಗಿ ಜನರಲ್ಲಿ ಜಾಗೃತಿ ಮೂಡುವಂತಾಯಿತು. ಹರ್ತಿಕೋಟೆಯ ಆಸುಪಾಸಿನ ಹಳ್ಳಿಗಳಲ್ಲಿಯ ಅನೇಕರಿಗೆ ಶಿಕ್ಷಣ ದೊರೆಯುವಂತಾಯಿತು. ಶೈಕ್ಷಣಿಕವಲಯದಲ್ಲಿ ಗ್ರಾಮೀಣ ಜನರು ಹಿಂದುಳಿದಿರುವುದರ ಬಗ್ಗೆ ಇವರಿಗೆ ಅಪಾರ ಕಾಳಜಿಯಿತ್ತು. ಊರು, ಕೇರಿ, ನೆರೆಯ ಗ್ರಾಮಗಳು ಶೈಕ್ಷಣಿಕವಾಗಿ ಅಭಿವೃದ್ಧಿ ಹೊಂದುವಲ್ಲಿ ವೀರನಾಯಕರು ತಮಗೆ ತಿಳಿದಮಟ್ಟಿಗೆ ಶ್ರಮವಹಿಸಿದ್ದಾರೆ. 'ವಿದ್ಯೆಯೇ ಅಮೃತ' ಎಂಬುದನ್ನು ಅವರು ಚೆನ್ನಾಗಿ ಅರಿತಿದ್ದರು. ಇವರ ನೆರವಿನಿಂದ ಬಂದಿಬ್ಬರು ವಿದೇಶಗಳಲ್ಲೂ ವಿದ್ಯಾಭ್ಯಾಸ ಮಾಡಿ ಬಂದರೆಂಬುದು ಗಮನಾರ್ಹ. ಇತರರ ಶೈಕ್ಷಣಿಕ ಏಳ್ಗೆಯೇ ತಮ್ಮ ಜೀವನದ ಧ್ಯೇಯವನ್ನಾಗಿಸಿಕೊಂಡ ಅಪರೂಪದ ವ್ಯಕ್ತಿ ವೀರನಾಯಕರು.

ಹಿರಿಯರಾದ ಬೆಳಗೆರೆ ಕೃಷ್ಣಶಾಸ್ತ್ರಿಗಳು ವೀರನಾಯಕರ ವಿದ್ಯಾಭಿಮಾನವನ್ನು ಅರಿತವರಲ್ಲಿ ಒಬ್ಬರು. ಅವರು ವ್ಯಕ್ತಪಡಿಸಿರುವಂತೆ, ''ಹರ್ತಿಕೋಟೆಯ ಸಮೀಪದ ಯರಬಳ್ಳಿಯಲ್ಲಿ ಒಂದು ಪ್ರೌಢಶಾಲೆ ಪ್ರಾರಂಭವಾಯಿತು. ಅದರ ಉದ್ಘಾಟನಾ ಸಮಾರಂಭಕ್ಕೆ ನಾನು ಹೋಗಿದ್ದೆ. ಅಲ್ಲಿ ನೆರೆದಿದ್ದ ಜನಸಮೂಹದಲ್ಲಿ ನನ್ನ ಆಸಕ್ತಿಯನ್ನು ಕೆರಳಿಸಿದ್ದ ಆ ವ್ಯಕ್ತಿ ಪ್ರಮುಖವಾಗಿ ಕಂಡರು. ಅಲ್ಲೇ ಇದ್ದ ನನ್ನ ಹಳೆಯ ಮಿತ್ರರೊಬ್ಬರನ್ನು ಇವರಾರೆಂದು ಕೇಳಿದೆ. ಅದಕ್ಕವರು 'ಇವರು ನಮ್ಮ ಹರ್ತಿಕೋಟೆಯ ವೀರನಾಯಕರಲ್ಲವೇ? ಇವರ ಪರಿಚಯ ನಿಮಗಿಲ್ಲವೇನು?' ಎಂದು ನಮ್ಮಿಬ್ಬರ ಪರಸ್ಪರ ಪರಿಚಯ ಮಾಡಿಸಿದರು. ಆ ಪ್ರೌಢಶಾಲೆಯ ಸ್ಥಾಪಕರಲ್ಲಿ ವೀರನಾಯಕರೂ ಒಬ್ಬ ಪ್ರಮುಖರೆಂದೂ ಅವರೊಬ್ಬ ವಿದ್ಯಾಭಿಮಾನಿಯೆಂದೂ ಆಗ ವ್ಯಕ್ತವಾಯಿತು. ಅಲ್ಲಿಂದ ಅವರ ನನ್ನ ಸ್ನೇಹ ಮುಂದುವರೆಯಿತು.''[೧೬] ಹರ್ತಿಕೋಟೆಯ ಆಸುಪಾಸಿನ ಗ್ರಾಮಗಳಲ್ಲೂ ಶಿಕ್ಷಣದ ಅಭಿವೃದ್ಧಿಯಾಗಬೇಕೆಂಬ ಮಹೋದ್ದೇಶ ಹೊಂದಿದ್ದವರು ವೀರನಾಯಕರು. ತಮ್ಮಿಂದ ಸಾಧ್ಯವಾದ ಮಟ್ಟಿಗೆ ಶೈಕ್ಷಣಿಕ ಕಾರ್ಯಕ್ರಮಗಳಲ್ಲಿ ಭಾಗಿಗಳಾಗಿ ಸೇವೆಸಲ್ಲಿಸುವ ಹಂಬಲ ವೀರನಾಯಕರಲ್ಲಿದ್ದುದು ಸ್ಪಷ್ಟ. ವೀರನಾಯಕರು ಶೈಕ್ಷಣಿಕವಾಗಿ ಹೊಂದಿದ್ದ ಶ್ರದ್ಧಾಸಕ್ತಿಗಳನ್ನು ಅವರ ಆತ್ಮೀಯರು ಇಂದಿಗೂ ಪ್ರಸ್ತಾಪಿಸುವುದುಂಟು.

ವೀರನಾಯಕರು ಗ್ರಾಮೀಣ ಪರಿಸರದ ಪ್ರತಿಷ್ಠಿತ ವ್ಯಕ್ತಿಗಳಲ್ಲೊಬ್ಬರಾಗಿದ್ದರು. ಸರಳತೆ ಮತ್ತು ಸ್ವಾಭಿಮಾನಗಳ ಪ್ರತೀಕವೆನಿಸಿದ್ದರು. ಅವರದು ನಿರಾಡಂಬರದ ಬದುಕು. ಸಹಕಾರ-ಸಹಭಾಗಿತ್ವದಲ್ಲಿ ಅವರಿಗೆ ಪೂರ್ಣ ನಂಬಿಕೆ. ಒಮ್ಮೆ ಯರಬಳ್ಳಿಯಲ್ಲಿ ರಾತ್ರಿವೇಳೆ ಶಾಲಾ ಕಾರ್ಯಕ್ರಮಗಳು ಮುಗಿದು ಊಟದ ಚಟುವಟಿಕೆ ಆರಂಭವಾಯಿತು. ಶಾಲಾ ಶಿಕ್ಷಕರು ಎಲ್ಲರಿಗೂ ಊಟ ಬಡಿಸಲು ಸಿದ್ಧರಾದರು. ಆದರೆ ಕಾರ್ಯಕ್ರಮದಲ್ಲಿ ಭಾಗಿಯಾಗಿದ್ದ ವೀರನಾಯಕರು ಅದಕ್ಕೆ ಅವಕಾಶ ಕೊಡದೆ, ಶಿಕ್ಷಕರನ್ನೂ ಇತರರನ್ನೂ ಬಲವಂತವಾಗಿ ಪಂಕ್ತಿಯಲ್ಲಿ ಕೂಡಿಸಿ ತಮ್ಮ ಗೆಳೆಯರೊಡನೆ ಸ್ವತಃ ತಾವೇ ಎಲ್ಲರಿಗೂ ಊಟ ಬಡಿಸಿ ಹರ್ಷಿಸಿದರು. ಈ ಘಟನೆಯನ್ನು ಹೆಚ್.ವಿ.ವೀರಭದ್ರಯ್ಯನವರ ಮಾತುಗಳಲ್ಲೇ ಇಲ್ಲಿ ಗಮನಿಸೋಣ :

“ಯರಬಳ್ಳಿಯಲ್ಲಿ ಶ್ರೀ ನೇತಾಜಿ ಗ್ರಾಮಾಂತರ ಪ್ರೌಢಶಾಲೆ ಪ್ರಾರಂಭವಾಗುವಲ್ಲಿ ಅವರ ಮುಕ್ತ ಸಹಾಯ ಸಹಕಾರವಿತ್ತು. ಶ್ರೀ ವೀರನಾಯ್ಕರು ಅದರ ಗೌರವ ಸದಸ್ಯರಾಗಿ ಸಕ್ರಿಯವಾಗಿ ದುಡಿದರು. ಅವರೆಂದೂ ಅದರ ಕಾರ್ಯಕ್ರಮಗಳಲ್ಲಿ ಹಾಜರಾಗದಿರುತ್ತಿರಲಿಲ್ಲ. ಈ ಲೇಖಕ ಆ ಶಾಲೆಯಲ್ಲಿ ಅಧ್ಯಾಪಕನಾಗಿದ್ದಾಗ ನಡೆದ ಒಂದು ಪ್ರಸಂಗವನ್ನು ಉಲ್ಲೇಖಿಸುವುದು ಸೂಕ್ತ. ಅಂದು ವಿದ್ಯಾರ್ಥಿಸಂಘದ ವಾರ್ಷಿಕೋತ್ಸವ ಸಮಾರಂಭ. ಶ್ರೀ ವೀರನಾಯ್ಕರು ಅದರಲ್ಲಿ ಭಾಗವಹಿಸಿದ್ದರು. ಸಮಾರಂಭದ ನಂತರ ಊಟದ ವ್ಯವಸ್ಥೆ ಮಾಡಲಾಗಿದ್ದಿತು. ಜನರೆಲ್ಲರೂ ಸ್ಕೂಲಿನ ಸಮೀಪದ ಮೈದಾನದಲ್ಲಿ ಬೆಳದಿಂಗಳಲ್ಲಿ ಊಟಕ್ಕೆ ಸಾಲಾಗಿ ಕುಳಿತರು. ಶಾಲೆಯ ಅಧ್ಯಾಪಕರು, ವಿದ್ಯಾರ್ಥಿಗಳು ಊಟಕ್ಕೆ ಬಡಿಸಲು ತೊಡಗುತ್ತಿದ್ದಂತೆಯೇ ಅಲ್ಲಿ ಹಾಜರಾದ ವೀರನಾಯ್ಕರು ಅವರೆಲ್ಲರನ್ನು ಬಲವಂತದಿಂದ ಊಟಕ್ಕೆ ಕೂರಿಸಿ, ಗೊಲ್ಲಳ್ಳಿ ಜಿ.ತಿಪ್ಪೇಸ್ವಾಮಿ, ಹನುಮಂತಯ್ಯ, ಯರಬಳ್ಳಿ ಛೇರ್‌ಮನ್ ರಾಮಯ್ಯ ಮೊದಲಾದ ಮುಖಂಡರುಗಳನ್ನು ಜತೆಗೂಡಿಸಿಕೊಂಡು ತಾವೇ ಸ್ವತಃ ಎಲ್ಲರ ಊಟವಾಗುವವರೆಗೂ ಬಡಿಸಿ, ವ್ಯವಸ್ಥೆಯನ್ನು ಅಚ್ಚುಕಟ್ಟಾಗಿ ನೋಡಿಕೊಂಡರು. ಎಲ್ಲರ ಸಂತೋಷಕ್ಕೆ ಕಾರಣರಾದರು. ತಾವು ಮೊದಲು ಊಟ ಮಾಡದೆ ಇತರರಿಗೆ ಊಟಕ್ಕೆ ನೀಡಿ ನೆಮ್ಮದಿ ಪಡೆದ ವೀರನಾಯ್ಕರನ್ನು ಕಂಡು, ಅದು ಅವರ ಜೀವನದೃಷ್ಟಿಯ ಒಂದು ಅಂಗವಾಗಿದ್ದಿತ್ತೆಂದು ಅರಿತುಕೊಂಡೆ.”[೧೭] ಅನ್ನದಾನವು ವಿದ್ಯಾದಾನದ ಇನ್ನೊಂದು ಮುಖವಲ್ಲವೇ? ಅಲ್ಲದೆ, ದಾನಗಳಲ್ಲಿ ಶ್ರೇಷ್ಠವಾದು ಅನ್ನದಾನವೇ. ವೀರನಾಯಕರು ಇದನ್ನು ಚೆನ್ನಾಗಿ ಅರಿತಿದ್ದರೆನ್ನಬೇಕು. ವಿನಯ ಸಂಪತ್ತಿನಿಂದ ಬೆಳಗುತ್ತಿದ್ದ ವೀರನಾಯಕರು, ವಿದ್ಯಾಸಂಪತ್ತಿನಿಂದ ಬೆಳಗುತ್ತಿದ್ದ ಜ್ಞಾನದೇಗುಲದಲ್ಲಿ ಸೇವಾಕರ್ತರಂತೆ ಭಾಗವಹಿಸಿದುದು ಅವರ ಸಂಸ್ಕಾರಕ್ಕೆ ಹಿಡಿದ ಕನ್ನಡಿ ಎನ್ನಬಹುದು.

ವೀರನಾಯಕರು ಮೊದಲಿಗೆ ಕಂದಾಯ ಇಲಾಖೆಯಲ್ಲಿ ಸೇವೆಸಲ್ಲಿಸಿದ್ದವರು. ಆದರೆ ಶೈಕ್ಷಣಿಕಕ್ಷೇತ್ರದ ಮಹತ್ವವನ್ನು ಇತರರಿಗಿಂತ ಚೆನ್ನಾಗಿ ಬಲ್ಲವರಾಗಿದ್ದರು. ಉನ್ನತಶಿಕ್ಷಣ ಪಡೆದವರೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದರು. ಅವರಿಗೆ ಲೇಖಕರು, ಬುದ್ಧಿಜೀವಿಗಳು, ಸಂಶೋಧಕರು ಮೊದಲಾದವರೊಡನೆ ಅನ್ಯೋನ್ಯ ಸಂಬಂಧವಿದ್ದಿತು. ಅವರನ್ನು ವೀರನಾಯಕರು ಅಪಾರವಾಗಿ ಗೌರವಿಸುತ್ತಿದ್ದರು. ಹೆಚ್.ವಿ. ವೀರಭದ್ರಯ್ಯನವರು ಪ್ರಸ್ತಾಪಿಸಿದಂತೆ, “ಹೆಚ್.ವಿ.ವೀರನಾಯ್ಕರು ನನ್ನ ತಂದೆಯವರು ಸ್ನೇಹಿತರು. ವೃತ್ತಿಯಲ್ಲಿ ನನ್ನ ತಂದೆಯವರು ಪ್ರಾಥಮಿಕ ಶಾಲೆಯ ಉಪಧ್ಯಾಯರಾಗಿದ್ದವರು. ವೀರನಾಯ್ಕರು ಕಂದಾಯ ಇಲಾಖೆಯಲ್ಲಿ ರೆವಿನ್ಯೂ ಇನ್ಸ್‌ಪೆಕ್ಟರ್‌ರಾಗಿದ್ದರು. ನಮ್ಮೂರಿನಲ್ಲಿ ಶೇಕ್‌ದಾರ್ ವೀರನಾಯಕರೆಂದೇ ಹೆಚ್ಚು ಜನಪ್ರಿಯರಾಗಿದ್ದರು. ಕಂದಾಯ ಇಲಾಖೆಯಲ್ಲಿದ್ದವರಿಗೂ ಪ್ರೈಮರಿ ಸ್ಕೂಲ್ ಅಧ್ಯಾಪಕರಿಗೂ ಸ್ನೇಹ ಬೆಳೆದುಬಂದಿದ್ದು ಕೇವಲ ಆಶ್ಚರ್ಯಕರವಾದದ್ದು. ಶೇಕ್‌ದಾರ್ ವೀರನಾಯಕರು ಇದಕ್ಕೆ ಅಪವಾದವಾಗಿ ಬಾಳಿದರು.”[೧೮] ವೀರನಾಯಕರು ಪ್ರವೃತ್ತಿಯಿಂದ ಶಿಕ್ಷಣ ಪ್ರೇಮಿಗಳಾಗಿದ್ದರೆಂಬುದು ಇದರಿಂದ ದೃಢಪಡುತ್ತದೆ. ವೀರನಾಯಕರಿಗೆ ಓದು-ಬರಹಗಳೆಂದರೆ ಪಂಚಪ್ರಾಣ. ದಿನದ ಬಹುಭಾಗವನ್ನು ಓದು-ಬರಹಗಳಲ್ಲೆ ಕಳೆಯುತ್ತಿದ್ದರು. ಜೊತೆಗೆ ವಿದ್ಯಾಭ್ಯಾಸವೆಂಬುದು ಅವರ ನೆಚ್ಚಿನ ವಿಷಯವಾಗಿತ್ತು. ಇವರು ಹತ್ತನೇ

ತರಗತಿವರೆಗೆ ಓದಿದ್ದರೂ ಇಂಗ್ಲಿಷ್‌ಭಾಷೆಯ ಮೇಲೆ ಉತ್ತಮ ಹಿಡಿತ ಸಾಧಿಸಿದ್ದರು. ಸ್ವಪ್ರತಿಭೆ-ಪರಿಶ್ರಮಗಳಿಂದ ಕೈಗೊಂಡ ಅಧ್ಯಯನದಿಂದ ಸುಧಿಸಿಕೊಂಡ ಆಗಾಧ ಪಾಂಡಿತ್ಯವೂ ಅವರ ನೆರವಿಗಿದ್ದಿತು.

## ೫.೪ ಇತರ ಸೇವಾಕ್ಷೇತ್ರಗಳು

ವೀರನಾಯಕರು ಸಾಧನೆಗೈದ ಹತ್ತು-ಹಲವು ಸೇವಾಕ್ಷೇತ್ರಗಳಲ್ಲಿ ರಂಗಭೂಮಿಯೂ ಒಂದು. ಇವರು ಸ್ವತಃ ನಾಟಕರಚನಾಕಾರಾಗಿದ್ದರು. ಕೆಲವೊಮ್ಮೆ ನಾಟಕಗಳನ್ನು ತಾವೇ ನಿರ್ದೇಶಿಸುತ್ತಿದ್ದರು. ಇವರ ನಾಟಕಗಳ ವಸ್ತುಗಳಾದರೂ ಪುರಾಣ ಮತ್ತು ಚರಿತ್ರೆ. ಕೆಲವು ವೇಳೆ ಚರಿತ್ರೆಯ ವಸ್ತುವನ್ನಷ್ಟೆ ಆಧರಿಸಿ ಇಡೀ ನಾಟಕವನ್ನು ರಚಿಸಿರುವುದುಂಟು. “ಪಾತ್ರಗಳ ಬಾಯಿಯಲ್ಲಿ ನಾಟಕದ ಉದ್ದಕ್ಕೂ ಚಾರಿತ್ರಿಕ ಅಂಶಗಳನ್ನು ಸಾಕಷ್ಟು ಆಡಿಸುವುದರೊಡನೆ”[೧೯] ಚಾರಿತ್ರಿಕ ನಾಟಕವನ್ನು ಪರಾಮರ್ಶನ ಯೋಗ್ಯವನ್ನಾಗಿ ಪರಿವರ್ತಿಸುವುದು ವೀರನಾಯಕರ ವಿಶೇಷವಾಗಿದ್ದಿತು. ನಾಯಕ ಅರಸರ ಕಾಲದ ವೈಭವ, ಕೆಚ್ಚು, ಪೌರುಷ, ಸ್ವಾಭಿಮಾನ, ಸಂಸ್ಕೃತಿಪ್ರೇಮ ಇತ್ಯಾದಿಯನ್ನು ಇವರು ತಮ್ಮ ನಾಟಕಗಳಲ್ಲಿ ಬಿಂಬಿಸಿದ್ದಾರೆ. ಇವರ ನಾಟಕಗಳು ಜನಪ್ರಿಯಗೊಳ್ಳಲು ಇಂಥಾ ವಿವರಗಳೂ ಕಾರಣವೆನಿಸುತ್ತವೆ.

ವೀರನಾಯಕರಲ್ಲಿದ್ದ ನಾಟಕಾಭಿರುಚಿ ಸರ್ವರ ಗಮನ ಸೆಳೆದಿದ್ದಿತು. ಇವರ ನಾಟಕಗಳ ಪ್ರದರ್ಶನವನ್ನು ಕಂಡು ಎಲ್ಲರೂ ಮೆಚ್ಚಿಕೊಳ್ಳುತ್ತಿದ್ದರು. ಇಂಥವರಲ್ಲಿ ಬೆಳಗೆರೆ ಕೃಷ್ಣಶಾಸ್ತ್ರಿಗಳೂ ಒಬ್ಬರು. ಅವರು ತಮ್ಮ ಮೆಚ್ಚುಗೆಯನ್ನು ಸೂಚಿರುವುದು ಹೀಗೆ : “ಈಗ ಸುಮಾರು ಎರಡುವರ್ಷಗಳ ಹಿಂದೆ ಚಳ್ಳಕೆರೆಯಲ್ಲಿ ನಡೆದ ಅಖಿಲ ಕರ್ನಾಟಕ ನಾಯಕ ಜನಾಂಗದ ಸಮ್ಮೇಳನದಲ್ಲಿ ಹರ್ತಿಕೋಟೆಯ ಯುವಕರು ‘ಒನಕೆ ಓಬವ್ವ’ ನಾಟಕವನ್ನು ಅಭಿನಯಿಸಿ ಸರ್ವರ ಮೆಚ್ಚುಗೆಯನ್ನು ಪಡೆದರು. ಆ ನಾಟಕವನ್ನು ರಚಿಸಿದವರು ಹಾಗೂ ನಿರ್ದೇಶಿಸಿದವರು ನಮ್ಮ ವೀರನಾಯಕರೇ ಎಂದು ತಿಳಿದಾಗಲಂತೂ ನನ್ನ ಸಂತೋಷಕ್ಕೆ ಪಾರವೇ ಇಲ್ಲದಂತಾಯಿತು.”[೨೦] ಸಾಮಾನ್ಯವಾಗಿ ವೀರನಾಯಕರು ನಾಯಕ ಜನಾಂಗದ ಸಮ್ಮೇಳನಗಳಲ್ಲಿ ತಮ್ಮ ನಾಟಕಗಳ ಪ್ರದರ್ಶನ ಏರ್ಪಡಿಸುತ್ತಿದ್ದರು. ಸ್ಥಳೀಯ ಪ್ರಭುಗಳು ಹಾಗೂ ಅವರ ಪರಿವಾರದವರೇ ವೀರನಾಯಕರ ನಾಟಕಗಳಲ್ಲಿ ಕಂಡುಬರುವ ಪ್ರಮುಖ ಪಾತ್ರಗಳಾದರೂ ಇಡೀ ನಾಟಕ ಕೇಂದ್ರೀಕೃತಗೊಳ್ಳುತ್ತಿದ್ದುದು ಶ್ರೀಸಾಮಾನ್ಯನ ಮೇಲೆಯೇ. ಇಂಥಾ ಸಾಮಾನ್ಯ ಪಾತ್ರಗಳ ಮೂಲಕ ಸಮಕಾಲೀನ ಸಮಸ್ಯೆಗಳನ್ನು ಸೂಕ್ಷ್ಮನೆಲೆಯಲ್ಲಿ ವಿಶ್ಲೇಷಿಸುತ್ತಿದ್ದುದು ವೀರನಾಯಕರ ವಿಶಿಷ್ಟ ಗುಣವಾಗಿದ್ದಿತು. ಸಾಮಾನ್ಯ ಜನರ ಮೇಲೆ ತೀವ್ರ ಪರಿಣಾಮವನ್ನುಂಟುಮಾಡುವ ನಿಟ್ಟಿನಲ್ಲಿ ಸಾಮಾನ್ಯ ಪಾತ್ರಗಳನ್ನು ಹೆಚ್ಚಿನ ಪರಿಶ್ರಮದಿಂದ ರೂಪಿಸುತ್ತಿದ್ದರು. ಇದರಿಂದಾಗುತ್ತಿದ್ದ ಪರಿಣಾಮವೆಂದರೆ, ಇವರ ನಾಟಕಗಳನ್ನು ಜನರು ಕಿಕ್ಕಿರಿದು ನೋಡಿ ಆಸ್ವಾದಿಸುತ್ತಿದ್ದುದು. ನಾಟಕಗಳ ಮೂಲಕವೂ ಜನಜಾಗೃತಿ ಉಂಟುಮಾಡಲು ವೀರನಾಯಕರು ಪ್ರಯತ್ನಿಸಿದುದು ಸ್ಪಷ್ಟ. ಪೌರಾಣಿಕ ನಾಟಕಗಳಲ್ಲಿ ಬರುವ ಪಾತ್ರಗಳು ಜನರನ್ನು ರಂಜಿಸುವಂತೆಯೇ ತಿಳುವಳಿಕೆಯ ತಿರುಳನ್ನೂ ಅವರ ತಲೆಯಲ್ಲಿ ಸೇರಿಸಲೆತ್ನಿಸುತ್ತವೆ. ಸಾಮಾಜಿಕ, ಸಾಂಸ್ಕೃತಿಕ ಹಾಗೂ

ರಾಜಕೀಯ ವಿಚಾರಗಳನ್ನು ಇಂಥಾ ನಾಟಕಗಳಲ್ಲಿ ಅಳವಡಿಸುವುದು ಸುಲಭ. ವೀರನಾಯಕರು ಮಾಡಿದ್ದು ಇದನ್ನೇ. ಅಲ್ಲದೆ, ತಮಗೆ ಇಷ್ಟವಾದುದನ್ನೇ ಜನರ ಮುಂದೆಯೂ ತಂದರು. ಜನರ ಪ್ರತಿಕ್ರಿಯೆಗೆ ತಕ್ಕಂತೆ ಇತರ ನಾಟಕಗಳನ್ನು ರಚಿಸಿದರು. ತಾವೂ ಜನರೊಡನೆ ಕುಳಿತು ನೋಡಿ ಸಂತೋಷಿಸಿದರು. ಇಂಥಾದ್ದನ್ನು ಸೂಕ್ಷ್ಮವಾಗಿ ಗಮನಿಸಿದ ಹೆಚ್.ದೆಯಾನಂದರು ಹೇಳಿದುದು ಹೀಗೆ : "ಬಣ್ಣಹಚ್ಚಿ ಯಕ್ಷಗಾನ-ಪೌರಾಣಿಕ ನಾಟಕವನ್ನಾಡಿಸಿ ಖುಶಿಪಡುತ್ತಿದ್ದ ವ್ಯಕ್ತಿ ವೀರನಾಯಕರು."೨೦

ವೀರನಾಯಕರಿಗೆ ಯಕ್ಷಗಾನದ ಬಗ್ಗೆ ವಿಶೇಷ ಆಸಕ್ತಿಯಿದ್ದಿತೆಂಬುದರಲ್ಲಿ ಎರಡುಮಾತಿಲ್ಲ. ಅವರು ಈ ಜನಸಾಮಾನ್ಯರ ಕಲೆಯಲ್ಲಿ ಬೆರೆತುಹೋಗಿದ್ದರು. ತಾವೇ ಮುಂದೆ ನಿಂತು ಇವುಗಳ ಪ್ರದರ್ಶನದ ಜವಾಬ್ದಾರಿ ತೆಗೆದುಕೊಳ್ಳುತ್ತಿದ್ದರು. ತಾವು ರೂಪಿಸಿದ ವಿಶಿಷ್ಟ ಪಾತ್ರಗಳಿಗೆ ಬಣ್ಣ ಬಳಿದು ಅವುಗಳು ನಟಿಸುವಂತೆ ಮಾಡುವ ಹವ್ಯಾಸ ಅವರಿಗೆ ತುಂಬಾ ಆಹ್ಲಾದವನ್ನುಂಟು ಮಾಡುತ್ತಿತ್ತು. ಅವರೇ ಕೆಲವೊಮ್ಮೆ ಖುದ್ದು ಹಾಜರಿದ್ದು ಯಕ್ಷಗಾನದ ರಂಗತಾಲೀನು ಮಾಡಿಸುತ್ತಿದ್ದರು. ಇವರ ಈ ಚಟುವಟಿಕೆಗಳನ್ನು ಹತ್ತಿರದಿಂದ ಕಂಡ ಎಂ.ವಿ.ಚಿತ್ರಲಿಂಗಯ್ಯನವರು, "ಪೌರಾಣಿಕ ಯಕ್ಷಗಾನಗಳನ್ನು ಏರ್ಪಡಿಸುವುದು, ತಾವೇ ಪ್ರಾಕ್ಟೀಸು ಮಾಡಿಸುವುದು ಮುಂತಾದ ಸಂಗೀತ, ಸಾಹಿತ್ಯಕ್ಷೇತ್ರಗಳಲ್ಲಿ ತಮ್ಮ ಬುದ್ಧಿಯನ್ನು ಚುರುಕುಗೊಳಿಸಿದರು"೨೨ ಎಂದಿರುವುದು ಸೂಕ್ತವಾಗಿದೆ. ಅಲ್ಲದೆ, ವೀರನಾಯಕರಿಗೆ ಪ್ರಿಯವಾದ ಪೌರಾಣಿಕ ಕಥಾಸಂದರ್ಭಗಳೆಂದರೆ, 'ಬಬ್ರುವಾಹನಕಾಳಗ', 'ಕರಿಭಂಟ' ಮೊದಲಾದವು. ಈ ಕುರಿತು ಎಂ.ವಿ. ಚಿತ್ರಲಿಂಗಯ್ಯನವರು ಹೇಳಿರುವುದು: "ತಾವೇ ಸ್ವತಃ ಬಯಲು ನಾಟಕಗಳನ್ನು ರಚಿಸತೊಡಗಿದರು. ತಾವೇ ಅವುಗಳನ್ನು ನಿರ್ದೇಶಿಸುತ್ತಿದ್ದರು. ಕರಿಭಂಟ, ದಾನಶೂರಕರ್ಣ, ಬಬ್ರುವಾಹನಕಾಳಗ ಮುಂತಾದ ಯಕ್ಷಗಾನ ಪ್ರಕಾರಕ್ಕೆ ಸೇರಿದ ನಾಟಕಗಳಿಗೆ ತಾವೇ ಸಂಭಾಷಣೆಗಳನ್ನೂ ಹಾಡುಗಳನ್ನೂ ಬರೆಯುತ್ತಿದ್ದರು. ಅವರೇ ಸ್ವತಃ ಮುಮ್ಮೇಳದಲ್ಲಿ ಹಾಡುತ್ತಿದ್ದರಂತೆ"೨೩ ಯಕ್ಷಗಾನ ಬಯಲಾಟಕ್ಕೆ ಹೊಂದುವ ನಾಟಕಗಳ ನಂತರ ವೀರನಾಯಕರು ಹೊಸಬಗೆಯ ರಂಗನಾಟಕಗಳನ್ನು ಬರೆಯತೊಡಗಿದರು. ಅವುಗಳೆಂದರೆ, 'ದ್ರೋಣ ಶಪಥಂ', 'ಬರಗಾಲ', 'ದುರ್ಗದ ಸಿಂಹಿಣಿ, ಓಬವ್ವ' ಮೊದಲಾದವು. ತಮ್ಮ ರಚನೆಗಳ ಮೂಲಕ ಸಮಾಜದಲ್ಲಿ ಸ್ವಲ್ಪವಾದರೂ ಪರಿವರ್ತನೆ ತರಬೇಕೆಂಬ ಹಂಬಲ ವೀರನಾಯಕರಲ್ಲಿದ್ದುದು ಸಹಜ. ಇದೆಲ್ಲಾ ಏನೇ ಇದ್ದರೂ ಇವರ ಯಕ್ಷಗಾನಗಳು, ನಾಟಕಗಳು ಅಂದಿನ ಸನ್ನಿವೇಶಕ್ಕೆ, ಅವಶ್ಯಕತೆಗೆ ಅನುಗಣವಾಗಿ ನಿರ್ಮಾಣಗೊಂಡಿದ್ದವೆನ್ನಲಡ್ಡಿಯಿಲ್ಲ.

ಜಾನಪದ ಅಧ್ಯಯನದಲ್ಲೂ ವೀರನಾಯಕರು ಆಸಕ್ತಿವಹಿಸಿದ್ದರು. ಅವರು ಚರಿತ್ರೆ ಬರವಣಿಗೆಗೆ ಬೇಕಾದ ಮಾಹಿತಿಯನ್ನು ಜಾನಪದದಿಂದಲೂ ಆರಿಸಿ ತೆಗೆದಿದ್ದಾರೆ. ಅವರು ಜನಪದಸಾಹಿತ್ಯದ ಸೊಗಡನ್ನು ಸರಿಯಾಗಿ ಗ್ರಹಿಸಿದವರಾಗಿದ್ದರು ಮಾತ್ರವಲ್ಲ, ಅದು ನಮ್ಮ ಸಾಮಾಜಿಕ ಪರಿಸ್ಥಿತಿಯನ್ನು ಸ್ಪಷ್ಟವಾಗಿ ಪ್ರತಿಬಿಂಬಿಸುತ್ತದೆಂದು ಅರಿತಿದ್ದರು. ಅವರು ಹಲವಾರು ಸಮ್ಮೇಳನಗಳಲ್ಲಿ ಜನಪದಹಾಡು, ಕೋಲಾಟದಹಾಡು ಮೊದಲಾದುವನ್ನು

ಹಾಡುವ ವ್ಯವಸ್ಥೆ ಮಾಡಿದ್ದರು. ಜಾನಪದದ ಬೆಂಬಲದಿಂದ ಜನಸಾಮಾನ್ಯರಿಗೆ ಇತಿಹಾಸದ ಸ್ಪಷ್ಟ ಚಿತ್ರಣ ನೀಡುವ ಉದ್ದೇಶ ಅವರದಾಗಿತ್ತು. ವೀರನಾಯಕರು ಜನಪದಕಲೆಗೆ ನೀಡಿದ ಆದ್ಯತೆಯನ್ನು ಎಂ.ವಿ.ಚಿತ್ರಲಿಂಗಯ್ಯನವರು, "ಶ್ರೀಯುತ ಹೆಚ್.ವಿ.ವೀರನಾಯಕರು ತಮ್ಮ ಅಸಂಖ್ಯಾತ ಚಟುವಟಿಕೆಗಳಲ್ಲಿ ಜನಪದಕಲೆಗೂ ವಿಶೇಷ ಸ್ಥಾನವನ್ನಿತ್ತಿದ್ದರು"[೨೬] ಎಂಬ ತಮ್ಮ ಮಾತುಗಳಲ್ಲಿ ವ್ಯಕ್ತಪಡಿಸಿದ್ದಾರೆ. ಜಾನಪದ ಅನುಭವವು ನಮ್ಮ ಬದುಕಿಗೆ ಮಾರ್ಗದರ್ಶಿಯಾಗಬಲ್ಲದು. ಜನಪದರ ಜೀವನ ಸಿದ್ಧಾಂತವು ಜನರಲ್ಲಿ ಶಾಂತಿ, ಪ್ರೀತಿ, ಆತ್ಮೀಯ ಭಾವನೆಗಳನ್ನುಂಟುಮಾಡಬಲ್ಲುದೆಂಬ ಗ್ರಹಿಕೆ ವೀರನಾಯಕರದು. ಮುಖ್ಯವಾಗಿ, ಸ್ಥಳೀಯತೆಯ ಸೊಗಡನ್ನು ತಮ್ಮ ಪರಿಸರದ ಜಾನಪದ ವೈಶಿಷ್ಟ್ಯಗಳ ಮೂಲಕ ಜನತೆಗೆ ಮುಟ್ಟಿಸುವ ಅಪೇಕ್ಷೆಯೂ ಅವರದಾಗಿದ್ದಿತು. ಅವರ ಉಪನ್ಯಾಸ ಮತ್ತು ಬರಹಗಳಲ್ಲಿ ಜಾನಪದೀಯ ಅಂಶಗಳು ಸಾಕಷ್ಟು ಪ್ರಮಾಣದಲ್ಲಿ ಮಿಳಿತವಾಗಿವೆ.

ಧಾರ್ಮಿಕಕ್ಷೇತ್ರದಲ್ಲೂ ತಮ್ಮ ಮಟ್ಟಿನ ಸೇವೆ ಸಲ್ಲಿಸಿದ್ದಾರೆ ವೀರನಾಯಕರು. ಅವರ ನೇತೃತ್ವದಲ್ಲಿ ಊರಿನ ಅನೇಕ ದೇವಾಲಯಗಳು ಜೀರ್ಣೋದ್ಧಾರಗೊಂಡವು. ಹರ್ತಿಕೋಟೆಯ 'ಊರದೇವರು' ಆದ ಶ್ರೀ ಆಂಜನೆಯ ದೇವಾಲಯದ ಮುಖಂಡತ್ವವನ್ನು ಇವರು ವಹಿಸಿಕೊಂಡಿದ್ದಾಗ ದೇವಾಲಯದ ಪೂಜಾವ್ಯವಸ್ಥೆ ಹಾಗೂ ಇತರ ಕಲಾಪಗಳು ಸರಿಯಾಗಿ ನಡೆಯುವಂತೆ ವ್ಯವಸ್ಥೆಗೊಳಿಸಿದ್ದರು. ದಿನನಿತ್ಯ ಪೂಜೆ-ಪುನಸ್ಕಾರಗಳು ಸಾಗಿಯೇ ಇರುವಂತೆ ನಿಗಾವಹಿಸಿದ್ದರು. ಹಬ್ಬಹರಿದಿನಗಳು ಬಂದರೆ ದೇವಾಲಯಗಳಿಗೆ ಸುಣ್ಣಬಣ್ಣಗಳನ್ನು ಬಳಿಸುತ್ತಿದ್ದರು. ಒಟ್ಟಿನಲ್ಲಿ, ಇವರ ಸೇವೆಯು ಜನರ ನೆನಪಿನಲ್ಲಿ ಸದಾಕಾಲ ಉಳಿಯುವಂತಾಯಿತೆಂಬುದು ಮುಖ್ಯ. ಹಾಗೆಯೇ, ಹರ್ತಿಕೋಟೆ ಸಮೀಪದ ಗ್ರಾಮವೊಂದರಲ್ಲಿ ಯಾದವರು ಅಥವಾ ಗೊಲ್ಲರಿಗೆ ಸೇರಿದ ಅವರ ಮೂಲದೇವತೆ ಗೊಲ್ಲಾಳಮ್ಮದೇವಿಯ ದೇವಾಲಯವನ್ನು ವೀರನಾಯಕರು ತಮ್ಮ ನೇತೃತ್ವದಲ್ಲಿ ಮನಮೋಹಕವಾಗುವಂತೆ ಕಟ್ಟಿಸಿಕೊಟ್ಟರು. ಈ ಜನಾಂಗದವರು ವೀರನಾಯಕರ ಇಂಥಾ ಸೇವೆಗಾಗಿ ಅವರನ್ನು ಇಂದಿಗೂ ತುಂಬಾ ಗೌರವಭಾವನೆಯಿಂದ ಸ್ಮರಿಸುತ್ತಾರೆ. ಈ ಜನಾಂಗದವರು ವೀರನಾಯಕರ ಕುಟುಂಬದವರ ಮೇಲೆ ಇಟ್ಟಿರುವ ವಿಶ್ವಾಸ ಆತ್ಮೀಯವಾದುದು. ಈ ಸಂದರ್ಭವನ್ನು ಹೆಚ್.ವಿ.ವೀರೇಂದ್ರಸಿಂಹ ಅವರು ಚಿತ್ರಿಸಿರುವುದು ಹೀಗೆ : "ನಮ್ಮೂರ ಪಕ್ಕದ ಬಾಲೇನಹಳ್ಳಿಯ ಗೊಲ್ಲರ ಜನಾಂಗದ ಕುಲದೇವತೆ ಗೊಲ್ಲಾಳಮ್ಮದೇವಿಯ ಗುಡಿಯು ಇವರ ನೇತೃತ್ವದಲ್ಲೇ ಬಹಳ ಸುಂದರವಾಗಿ ನಿರ್ಮಾಣಗೊಂಡಿದೆ. ಈ ದೇವರ ಇಡೀ ಒಕ್ಕಲು ತಂದೆಯವರ ಮಾತನ್ನು ಯಾವತ್ತು ಕಡೆಗಣಿಸುತ್ತಿರಲಿಲ್ಲ. ಈ ಜನಾಂಗದ ಕುಲದೇವಿ ಗೊಲ್ಲಾಳಮ್ಮ ಇವರಲ್ಲಿ ನಿಷ್ಠೆ ಇಡಲು ತನ್ನ ಭಕ್ತ ಸಮೂಹಕ್ಕೆ ಪ್ರೇರೇಪಿಸಿದ್ದಳಂತೆ! ಈ ದೇವರ ಅಪಾರಭಕ್ತ ಮಂಡಳಿ ತಂದೆಯವರನ್ನು ಬಹಳ ಗೌರವದಿಂದ ನಡೆಸಿಕೊಳ್ಳುತ್ತಿದ್ದರು. ಈಗಲೂ ಅದೇ ತೆರನಾದ ಪೂಜ್ಯಭಾವನೆ ಅವರಲ್ಲಿದೆ."[೨೭]

ಸಾಮಾನ್ಯವಾಗಿ ಹರ್ತಿಕೋಟೆಯಲ್ಲಿ ಕಾಣಸಿಗುವ ಸಮಸ್ತ ದೇವಾಲಯಗಳ ಚಾರಿತ್ರಿಕ ಹಿನ್ನೆಲೆಯನ್ನು ಸಾಕಷ್ಟು ಅರಿತವರಾಗಿದ್ದರು ವೀರನಾಯಕರು. ಒಂದು ವಿಧದಲ್ಲಿ ಹರ್ತಿಕೋಟೆ ಕುರಿತು ತಲಸ್ಪರ್ಶಿಜ್ಞಾನವನ್ನು

ಅವರು ಸಂಪಾದಿಸಿದ್ದರೆನ್ನುವುದು ಸೂಕ್ತ. ಹೆಚ್.ವಿ.ವೀರಭದ್ರಯ್ಯನವರು ಹೇಳಿದಂತೆ, "ಊರಿನಲ್ಲಿ ಪದ್ಮಣ್ಣನಾಯಕನ ಸಮಾಧಿಯಿಂದ ಸುಮಾರು ಮೂವತ್ತು ಮೂವತ್ತೈದು ದೇವಾಲಯಗಳಿವೆ. ಇವೆಲ್ಲವುಗಳ ಇತಿಹಾಸವನ್ನು ಬಲ್ಲವರಾಗಿದ್ದರು ಶ್ರೀ ವೀರನಾಯಕರು."[೨೬] ಯಾರಾದರೂ ಗಣ್ಯವ್ಯಕ್ತಿಗಳು ಊರಿಗೆ ಬಂದರೆ ವೀರನಾಯಕರು ಅವರನ್ನು ಸ್ವಾಗತಿಸಿ, ಸತ್ಕರಿಸಿ ಊರಿನ ಪ್ರಮುಖ ದೇವಾಲಯಗಳ ಬಗ್ಗೆ, ಅವುಗಳ ಹಿನ್ನೆಲೆಯಲ್ಲಿರುವ ಇತಿಹಾಸ ಹಾಗೂ ಸಾಂಸ್ಕೃತಿಕ ಆಚರಣೆಗಳ ಬಗ್ಗೆ ಅಧಿಕೃತವಾಗಿ ತಿಳಿಸಿಕೊಡುತ್ತಿದ್ದರು. ಇದನ್ನು ಇನ್ನಷ್ಟು ವಿವರವಾಗಿ ಹೀಗೆ ಹೇಳಿದ್ದಾರೆ ಬೆಳಗೆರೆ ಕೃಷ್ಣಶಾಸ್ತ್ರಿಗಳು : "...ಅಲ್ಲಿಂದ ಭಜನೆ ಸಂಘದವರಿಂದ ಭಕ್ತಿಗೀತೆಗಳನ್ನು ಹಾಡಿಸುತ್ತಾ ಜಯಘೋಷಗಳೊಂದಿಗೆ ಬೀದಿಬೀದಿಗಳಲ್ಲೂ ಕರೆದುಕೊಂಡು ಹೋಗಿ, ಅಲ್ಲಿನ ದೇವಾಲಯಗಳಲ್ಲಿ ಪೂಜೆಮಾಡಿಸಿ, ಸಂಬಂಧಪಟ್ಟ ವಿಶೇಷಾಂಶಗಳನ್ನು ಸಂಕ್ಷಿಪ್ತವಾಗಿ ತಿಳಿಸುತ್ತಾ, ಹರ್ತಿಕೋಟೆಯ ಐತಿಹಾಸಿಕ ಪ್ರಾಮುಖ್ಯತೆಯನ್ನು, ಅಲ್ಲಿ ಪ್ರತಿವರ್ಷವು ನಡೆಯುವ ಭಾರೀ ದನಗಳ ಜಾತ್ರೆಯ ವಿಷಯವನ್ನು ವಿವರಿಸುತ್ತ ಆ ದಿನವೆಲ್ಲಾ ನಮ್ಮೊಂದಿಗೆ ಸಹಕರಿಸಿದರು ಶ್ರೀ ವೀರನಾಯಕರು."[೨೭]

ಧರ್ಮದಲ್ಲಿ ಶ್ರದ್ಧೆಯಿದ್ದಿತು ವೀರನಾಯಕರಿಗೆ. ಅಲ್ಲದೆ, ಅವರಿಗೆ ಹಿಂದೂಧರ್ಮದ ಮೇಲೆ ತುಂಬಾ ಅಭಿಮಾನವಿತ್ತು. ಹಿಂದೂಧರ್ಮದ ಎರಡು ಪ್ರಮುಖ ಮಹಾಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತಗಳನ್ನು ಅವರು ಶ್ರದ್ಧೆಯಿಂದ ಅಭ್ಯಸಿಸಿದ್ದರು. ಈ ಗ್ರಂಥಗಳ ಸಾರವನ್ನು, ಮಹತ್ವವನ್ನು ತಮ್ಮದೇ ವಿಶಿಷ್ಟ ಶೈಲಿಯಲ್ಲಿ ಭಾವಪೂರ್ಣವಾಗಿ ಮನೆಯಲ್ಲಿನ ಎಲ್ಲ ಸದಸ್ಯರಿಗೂ ತಿಳಿಸಿ ಹೇಳಲು ಯತ್ನಿಸುತ್ತಿದ್ದರು. ಇತರ ಪುಣ್ಯಪುರುಷರ ಬಗ್ಗೆಯೂ ಅವರಲ್ಲಿ ಅಪಾರ ಭಕ್ತಿಯಿದ್ದಿತು. ಈ ವಿಚಾರವಾಗಿ ಹೆಚ್.ವಿ.ವೀರೇಂದ್ರಸಿಂಹ ಅವರು ಹೇಳುವಂತೆ, "ನನ್ನ ಬಾಲ್ಯದ ದಿನಗಳಲ್ಲಿ ಅವರು ನಮ್ಮ ಮನೆಯವರನ್ನೆಲ್ಲ ಕುಳ್ಳಿರಿಸಿಕೊಂಡು ರಾಮಾಯಣ, ಮೆಹಾಭಾರತ ಕಾವ್ಯಗಳನ್ನು ಓದಿ ಅರ್ಥ ಹೇಳುತ್ತಿದ್ದುದನ್ನು ಕಂಡಿದ್ದೇನೆ. ಶಿವರಾತ್ರಿಯ ದಿನಗಳಲ್ಲಿ ಬೇಡರಕಣ್ಣಪ್ಪನಕಥೆ, ಶಿವಶರಣರಕಥೆಗಳನ್ನು ರಾತ್ರಿಯಿಡೀ ಹೇಳುತ್ತಿದ್ದರು. ನಾವು ಹುಡುಗರಿಗೆ ನಿದ್ರೆ ಬಂದರೆ ಅಷ್ಟು ಹೊತ್ತಿನಲ್ಲೂ ದೂರ ಓಡಿಸಿ ಮತ್ತೆ ಕುಳ್ಳಿರಿಸಿಕೊಳ್ಳುತ್ತಿದ್ದರು."[೨೮] ಇಲ್ಲಿ ವ್ಯಕ್ತಪಡಿಸಬಹುದಾದ ಅಂಶಗಳೆಂದರೆ, ಪರಂಪರೆಯನ್ನು ಗೌರವಿಸುವ ಪ್ರವೃತ್ತಿ ವೀರನಾಯಕರಲ್ಲಿ ಇದ್ದುದು ಮಾತ್ರವಲ್ಲ, ಅದನ್ನು ಅವರು ಇತರರಲ್ಲೂ ಕಾಣಲು ಬಯಸುತ್ತಿದ್ದರು. ಮುಖ್ಯವಾಗಿ, ಎಳೆಯರಲ್ಲಿ ಅಂಥಾ ಗುಣವನ್ನು ಬೆಳೆಸುವ ಅಪೇಕ್ಷೆ ಹೊಂದಿದ್ದರು. ಭಕ್ತಿಪ್ರಧಾನವಾದ ಮಹಾತ್ಮರ ಹಾಗೂ ಮಹಿಮಾಪುರುಷರ ಕಥೆಗಳನ್ನು ಹೇಳುವುದರ ಮೂಲಕ ಗ್ರಾಮೀಣರಲ್ಲಿ ಆದರ್ಶಗುಣಗಳನ್ನು ಬೆಳೆಸಲು ಪ್ರಯತ್ನಿಸುತ್ತಿದ್ದರು. ಬೇಡಜನಾಂಗದ ಮೂಲಪುರುಷನಾದ ವಾಲ್ಮೀಕಿ ಮಹರ್ಷಿಯನ್ನು ವೀರನಾಯಕರು ಬಹುವಾಗಿ ಆರಾಧಿಸುತ್ತಿದ್ದರು. ವಾಲ್ಮೀಕಿ ಜನಾಂಗಕ್ಕೆ ಅವರು ಸೇರಿದವರಾಗಿದ್ದು, ವಾಲ್ಮೀಕಿಯ ದಿವ್ಯ ಸಂದೇಶವನ್ನು, ಆತನ ಅಸ್ತಿತ್ವದ ಸಂಕೇತವನ್ನು ತಮ್ಮ ಸಮುದಾಯದವರಿಗೂ ಇತರರಿಗೂ ಮುಟ್ಟಿಸುವ ಕಾತರವಿದ್ದಿತು ಅವರಲ್ಲಿ. ಅವರು ತಮ್ಮ ಒಂದು ಕೃತಿಯಲ್ಲಿ 'ವಾಲ್ಮೀಕಿ' ಶಬ್ದದ ಮೂಲ ಹಾಗೂ 'ಮಹರ್ಷಿ' ಎಂಬುದು

ಬಳಕೆಗೆ ಬಂದ ಸಂದರ್ಭಗಳನ್ನು ಅಧ್ಯಯನಿಸಿ ವಿವರವಾಗಿ ನಿರೂಪಿಸಿದ್ದಾರೆ. ವಾಲ್ಮೀಕಿಯು ತಾನು ಮಹರ್ಷಿಯಾಗುವ ಮೊದಲು ಕ್ರೂರಗುಣಗಳುಳ್ಳ ಮಹಾ ದರೋಡೆಕೋರನಾಗಿದ್ದ. ಇವನು ಕೇಂದ್ರಸ್ಥಾನದಲ್ಲಿದ್ದುಕೊಂಡು ತನ್ನ ಏಳುಜನ ಮಕ್ಕಳಲ್ಲಿ ಏಳು ಸರಣಿ ಪಡೆಗಳನ್ನು ಏರ್ಪಡಿಸಿ ಅವುಗಳ ಮೂಲಕ ದರೋಡೆ ಮಾಡಿಸುತ್ತಿದ್ದ. ಇಂಥ ವ್ಯಕ್ತಿತ್ವವನ್ನು ಕಂಡ ಜನರು ಈತನನ್ನು 'ವಾಲ್ಮೀಕಿ' ಎಂದು ಕರೆದರಂತೆ. ಸಂಸ್ಕೃತದಲ್ಲಿ 'ವಾಲ್ಮೀಕಿ' ಎಂದರೆ ಸಕಲ ದುರ್ಗುಣಗಳುಳ್ಳ ಕ್ರೂರ ವಿಷಜಂತುವಾದ ಹಾವು ಇರುವ 'ಹುತ್ತ' ಎಂದು ಅರ್ಥ.

ದುರ್ಜನರು ಸಜ್ಜನರಾಗುವ ಪ್ರಕ್ರಿಯೆಯ ಇನ್ನೊಂದು ಆಯಾಮವೇ ಈ ವಾಲ್ಮೀಕಿಯ ವೃತ್ತಾಂತ. ಇದನ್ನು ಸೂಕ್ಷ್ಮವಾಗಿ ಗ್ರಹಿಸಿದ್ದ ವೀರನಾಯಕರು, ಭಾರತೀಯ ಸಂಸ್ಕೃತಿಯ ಪ್ರಮುಖ ಹಾಗೂ ಪ್ರಭಾವಿ ಸಂಕೇತವಾದ ವಾಲ್ಮೀಕಿ ಮಹರ್ಷಿಯ ಕಥೆಯನ್ನು ಸ್ಥಳೀಯ ಧೋರಣೆಗನುಸಾರ ಸರಳವಾಗಿ ಜನರಿಗೆ ಮುಟ್ಟಿಸಲು ಪ್ರಯತ್ನಿಸಿದರು. ವಾಲ್ಮೀಕಿ ಮಹರ್ಷಿಯನ್ನು ಕುರಿತು ವೀರನಾಯಕರು ಪ್ರತ್ಯೇಕವಾಗಿ ಬರೆಯಲಿಲ್ಲವಾದರೂ ಅವರ ಜೀವನದೃಷ್ಟಿ, ಧೋರಣೆ, ಬರವಣಿಗೆ, ಉಪನ್ಯಾಸ ಇತ್ಯಾದಿಯೆಲ್ಲದರಲ್ಲೂ ವಾಲ್ಮೀಕಿಯ ಪ್ರಭಾವ ಗಾಢವಾಗಿರುವುದನ್ನು ನೋಡಬಹುದು. ಸಮಾನತೆ, ಸಹಜೀವನ, ಸಹಕಾರ ತತ್ವಗಳಿಗನುಗುಣವಾಗಿ ತಾವು ಪ್ರವೇಶಿಸಿದ ಎಲ್ಲ ಕ್ಷೇತ್ರಗಳಲ್ಲೂ ಸೇವಾಕಾರ್ಯ ಕೈಗೊಂಡುದು ವೀರನಾಯಕರ ಹೆಗ್ಗಳಿಕೆ. ವಿದ್ವತ್ತು, ವಿನಯ, ದೂರದೃಷ್ಟಿಗಳ ಫಲವಾಗಿ ವೀರನಾಯಕರು ಎಲ್ಲ ಕ್ಷೇತ್ರಗಳಲ್ಲೂ ಅಪಾರವಾಗಿ ಸಾಧಿಸಿದರು ಮಾತ್ರವಲ್ಲ, ಇತರರಿಗೆ ಮಾದರಿಯಾದರು. ಇತಿಹಾಸವನ್ನು ಪ್ರೀತಿಸಿ ಅದನ್ನು ಬೆಳೆಸುತ್ತಲೇ ಅದರ ಭಾಗವಾಗಿ ಅಮರರಾದರು.

□□

**ಟಿಪ್ಪಣಿಗಳು**

೧. ಹರತಿಸಿರಿ, ಪು.೧೨೫೭-೧೨೫೮

೨. ಅದೇ, ಪು.೧೨೦೭

೩. ಅದೇ, ಪು.೧೨೪೫

೪. ಅದೇ, ಪು.೧೨೦೬

೫. ಅದೇ, ಪು.೧೨೧೮

೬. ಅದೇ, ಪು.೧೨೧೭

೭. ಇತಿಹಾಸಕಾರ ಹೆಚ್.ವಿ.ವೀರನಾಯಕ ಹರತಿ, ಪು.೬೫

೮. ವಾಲ್ಮೀಕಿ ಸಂದೇಶ, ಮಾರ್ಚ್ ೧೯೮೪, ಪು.೧೯

೯. ಹರತಿಸಿರಿ, ಪು.೧೨೮೬

೧೦. ಅದೇ, ಪು.೧೨೮೬-೧೨೮೭

೧೧. ಅದೇ, ಪು.೧೩೦೧

೧೨. ವಾಲ್ಮೀಕಿ ಸಂದೇಶ, ಮಾರ್ಚ್ ೧೯೮೪, ಪು.೧೯

೧೩. ಅದೇ, ಪು.೧೯

೧೪. ಹರತಿಸಿರಿ, ಪು.೧೨೫೯

೧೫. ಅದೇ, ಪು.೧೨೫೮

೧೬. ಅದೇ, ಪು.೧೨೦೦

೧೭. ಅದೇ, ಪು.೧೨೦೭

೧೮. ಅದೇ, ಪು.೧೨೦೪

೧೯. ಅದೇ, ಪು.೧೩೦೬

೨೦. ಅದೇ, ಪು.೧೨೦೨

೨೧. ವಾಲ್ಮೀಕಿ ಸಂದೇಶ, ಮಾರ್ಚ್ ೧೯೮೪, ಪು.೧೯

೨೨. ಅದೇ, ಪು.೨೨

೨೩. ಅದೇ, ಪು.೨೨

೨೪. ಅದೇ, ಪು.೨೨

೨೫. ಹರತಿಸಿರಿ, ಪು.೧೨೫೮

೨೬. ಅದೇ, ಪು.೧೨೦೬

೨೭. ಅದೇ, ಪು.೧೨೦೧

೨೮. ಅದೇ, ಪು.೧೨೫೬

## ೬

# ಉಪಸಂಹಾರ

ಗ್ರಾಮೀಣ ಪ್ರತಿಭೆಯ ಪ್ರತಿಷ್ಠಿತ ಪ್ರತೀಕವೆನಿಸಿದ ಹೆಚ್.ವಿ.ವೀರನಾಯಕ 'ಹರತಿ' ಅವರ ಜೀವನ-ಸಾಧನೆ, ಬರಹ-ಸಂಶೋಧನೆ ಇತ್ಯಾದಿಯನ್ನು ಇಡಿಯಾಗಿ ವಿಶ್ಲೇಷಿಸುವುದೆಂದರೆ, ಅದೊಂದು ವಿಶಿಷ್ಟ ಬಗೆಯ ಅನುಭವವೆನ್ನಬಹುದು. ನಿರಾಡಂಬರ, ನಿಗರ್ವಿ ವ್ಯಕ್ತಿತ್ವ ಅವರದು. ವ್ಯಕ್ತಿಯಾಗಿ, ಗ್ರಾಮೀಣ ಪರಿಸರದ ಮೂಲ ಸೊಗಡನ್ನು ಆಸ್ವಾದಿಸುತ್ತಾ ಗ್ರಾಮೀಣ ಸಂಸ್ಕೃತಿಯಲ್ಲಿ ಪೂರ್ತಿ ಲೀನವಾಗಿದ್ದವರು; ಗ್ರಾಮೀಣರೊಡನೆ ಅಂತಃಕರಣಪೂರ್ವಕ ಮಾನವೀಯ ಸಂಬಂಧಗಳನ್ನು ಬೆಳೆಸಿಕೊಂಡವರು. ಶಕ್ತಿಯಾಗಿ, ಸಂಘಟನೆಯ ನೆಲೆಯಲ್ಲಿ ವೈಚಾರಿಕವಾಗಿ ಗ್ರಾಮೀಣರಲ್ಲಿ ಜಾಗೃತಿಯನ್ನುಂಟು ಮಾಡಿದವರು; ಅವರ ಆಚಾರ-ವಿಚಾರಗಳ ಪರಿವರ್ತನೆಗೆ ಕಿಂಚಿತ್ತಾದರೂ ಪ್ರಭಾವ ಬೀರಿದವರು. ಪ್ರೊ.ಲಕ್ಷ್ಮಣ್ ತೆಲಗಾವಿಯವರು ಗ್ರಹಿಸಿದಂತೆ, "ವೀರನಾಯಕರದು ಮಾನವತಾಪ್ರಜ್ಞೆಯುಳ್ಳ ಚೈತನ್ಯಸ್ವರೂಪಿ ವ್ಯಕ್ತಿತ್ವ!"[೧]

ಸಮಾಜಚಿಂತಕ, ಶಿಕ್ಷಣಪ್ರೇಮಿ, ಪ್ರಗತಿಪರ ಕೃಷಿಕ, ಜಿಲ್ಲೆಯ ರಾಜಕೀಯ ಧುರೀಣ, ಹೋರಾಟಗಾರ, ಬರಹಗಾರ, ಸಂಶೋಧಕ, ಪತ್ರಕರ್ತ, ಮುದ್ರಕ, ರಂಗಭೂಮಿಯ ಪ್ರೇರಕ ಇವೆಲ್ಲವೂ ಆಗಿದ್ದ ವೀರನಾಯಕರು, ಹಳ್ಳಿಗಾಡಿನ ನೆಲೆಯಿಂದ ಮೂಡಿಬಂದ ಒಬ್ಬ ಅಪರೂಪದ ವ್ಯಕ್ತಿ. ತಮ್ಮ ಊರು, ಅಲ್ಲಿಯ ಬದುಕು, ಇತಿಹಾಸ, ಸ್ಮಾರಕ ಇವೆಲ್ಲವನ್ನು ಅಭಿಮಾನಪೂರ್ವಕ ಪರಿಭಾವಿಸಿ, ಅವುಗಳನ್ನು ಪ್ರೀತಿಸಿ ಅವುಗಳ ಭಾವನೆಗಳಿಗೆ ಬಾಯಿಯಾದವರು; ಸವಾಲು-ಸಮಸ್ಯೆಗಳಿಗೆ ಸ್ಪಂದಿಸಿ ಶ್ರಮಿಸಿದವರು. ಸಮಾಜ ಸೇವಾಕಾರ್ಯಕ್ಕೂ ಕೈಹಾಕಿ ಸೈ ಎನಿಸಿಕೊಂಡವರು. ಜನಸಂಘಟಕರಾಗಿ, ಹಲವಾರು ಸಭೆ-ಸಮಾರಂಭ-ಸಮ್ಮೇಳನಗಳ ಆಯೋಜಕರಾಗಿ, ಜನಪರ ಕಾರ್ಯಕ್ರಮಗಳ ಪ್ರಾಯೋಜಕರಾಗಿ ವಿವಿಧ ಬಗೆಯಲ್ಲಿ ಕಾರ್ಯನಿರ್ವಹಿಸಿದವರು. ಗ್ರಾಮೀಣ ಪರಿಸರದಲ್ಲಿ ವೀರನಾಯಕರು ಜನಪ್ರಿಯರಾಗಲು ಅವರು ಕೈಗೊಂಡ ಇಂಥಾ ಚಟುವಟಿಕೆಗಳೇ ಕಾರಣ.

ಬಹುಮುಖಿ ಚಿಂತನೆ ಮತ್ತು ಸೇವಾ ಮನೋಧರ್ಮಗಳಿಂದ ವೀರನಾಯಕರು ಪಂಡಿತರು ಮತ್ತು ಪಾಮರರಿಗೆ ಪ್ರಿಯವೆನಿಸಿದುದು ಸಹಜ. ಸಾಮಾಜಿಕವಾಗಿ, ತಮ್ಮ ಹಿಂದುಳಿದಿರುವಿಕೆಯನ್ನು ಸಮಾಜಶಾಸ್ತ್ರೀಯ ನೆಲೆಯಲ್ಲಿ ವಿಶ್ಲೇಷಿಸಲು ಪ್ರಯತ್ನಿಸಿದರು. ಶೈಕ್ಷಣಿಕ ಹಿನ್ನಡೆಯನ್ನು ಶಿಕ್ಷಣತಜ್ಞರ ಮಟ್ಟವನ್ನು ತಲುಪುವುದರೊಡನೆ ಸರಿದೂಗಿಸಿದ್ದರು. ಸಕ್ರಿಯ ರಾಜಕಾರಣದ ಕೊರತೆಯನ್ನು ಗ್ರಾಮೀಣಾಭಿವೃದ್ಧಿ ಕಾರ್ಯಗಳಲ್ಲಿ ತೀವ್ರವಾಗಿ ತೊಡಗಿಸಿಕೊಳ್ಳುವುದರ ಮೂಲಕ ತುಂಬಿಕೊಂಡರು. ಮುಖ್ಯವಾಗಿ, ಸೃಜನನೆಲೆಯಲ್ಲಿ

ಸವಾಲಾದುದನ್ನು ಸಾಹಿತಿಯಾಗಿ, ಸಂಶೋಧಕರಾಗಿ ಸಾಧಿಸುವುದರ ಮೂಲಕ ಸಮರ್ಥವಾಗಿ ಪ್ರತಿಕ್ರಿಯಿಸಿದರು. ಇವೆಲ್ಲವನ್ನೂ ವೀರನಾಯಕರು ಸಾಧಿಸಿ ತೋರಿಸಿದುದು ಓರ್ವ ಅಪ್ಪಟ ಹಳ್ಳಿಗಾಡಿನ ವ್ಯಕ್ತಿಯಾಗಿ. ನಾಯಕ ಮನೆತನದ ನೆಲೆ-ಹಿನ್ನೆಲೆಯೊಡನೆ ಅವರು ವೀರರಂತೆ ಪ್ರವರ್ತಿಸಿದುದು ಸಹಜ. ಅಪಾರ ಆತ್ಮವಿಶ್ವಾಸ, ಸ್ವಾಭಿಮಾನ, ಧೈರ್ಯ, ದೂರದೃಷ್ಟಿ ಇತ್ಯಾದಿ ಮಾನಸಿಕ ಮತ್ತು ಬೌದ್ಧಿಕ ಬಲಗಳ ನೆರವಿನಿಂದ ಅವರು ಮುನ್ನಡೆದುದು ವಾಸ್ತವ.

ಸರ್ವದೃಷ್ಟಿಯಿಂದಲೂ ಹಿಂದುಳಿದಿರುವ ಭಾರತದ ಹಳ್ಳಿಗಳನ್ನು ಕುರಿತು ವ್ಯಾಖ್ಯಾನಿಸುವುದೆಂದರೆ, ಅದು ಬಡತನ, ಅಜ್ಞಾನ, ಅಸಹಾಯಕತೆಗಳನ್ನು ಕುರಿತ ವಿಶ್ಲೇಷಣೆಯೆನಿಸುತ್ತದೆ. ತೀರಾ ಹಿಂದುಳಿದ ಹರ್ತಿಕೋಟೆಯೂ ಸಾಗಿಬಂದುದು ಇಂಥದೇ ಪರಂಪರೆಯಲ್ಲಿ. ಆದರೆ ಗ್ರಾಮಾಭಿವೃದ್ಧಿಯಲ್ಲಿ ತೊಡಗಿಸಿಕೊಂಡ ಹಲವಾರು ಮಹಾನ್‌ವ್ಯಕ್ತಿಗಳ ಕಾರಣವಾಗಿ ಈ ದೇಶದ ನೂರಾರು ಹಳ್ಳಿಗಳ ಸ್ವರೂಪವೇ ಇಂದು ಬದಲಾಗಿದೆ. ಅವು ಮಾದರಿಗ್ರಾಮಗಳೆನಿಸಿ ಗ್ರಾಮೀಣರಿಗೆ ಬದುಕಿನ ಹೊಸಮಾರ್ಗ ತೋರಿವೆ. ಹರ್ತಿಕೋಟೆಯ ಮಟ್ಟಿಗೆ, ಕೆಲವಾರು ಪ್ರತಿಭಾವಂತರು ಇಲ್ಲಿ ಜನ್ಮಿಸಿದರೂ ಊರಿಗಾಗಿ ತಮ್ಮನ್ನು ತೆತ್ತುಕೊಂಡವರು ಇಲ್ಲವೇ ಇಲ್ಲ ಎನ್ನುವಂಥಾ ಪರಿಸ್ಥಿತಿಯಿದ್ದಿತು. ಇದು ಸಹಜವೂ ಆಗಿದ್ದಿತು. ಅಂಥಾ ನಿರ್ವಾತ ಪರಿಸ್ಥಿತಿಯಲ್ಲಿ ಊರನ್ನು ಪ್ರವೇಶಿಸಿದವರು ವೀರನಾಯಕರು. ಅವರ ಅಸ್ತಿತ್ವವೇ ಊರಿನಲ್ಲಿ ಹಲವು ವಿಧದ ಸಂಚಯನಗಳಿಗೆ ಕಾರಣವಾಯಿತು. ಅವರ ವ್ಯಕ್ತಿತ್ವವೇ ಆವರೆಗೆ ಕವಿದ ಕಾವಳವನ್ನು ದೂರ ಓಡಿಸಿತು. ಎಲ್ಲವೂ ನಿಚ್ಚಳವಾದಾಗ, ಆವರೆಗೆ ಶೋಷಣೆ, ದಬ್ಬಾಳಿಕೆ, ಅಸಹನೆ, ಅಸಹಕಾರ, ಜಾತೀಯತೆ, ಅಪಮಾನ, ಅಸಹಾಯಕತೆಗಳಿಂದ ಸತತವಾಗಿ ನರಳಿ ಕುಗ್ಗಿಹೋಗಿದ್ದ ಸಮುದಾಯಗಳಿಗೆ ತಮ್ಮ ನಿಜಸ್ಥಿತಿಯ ಅರಿವುಂಟಾಯಿತು. ಬಡವರು ಕನಲಿದರು; ಉಳ್ಳವರು ಚಡಪಡಿಸಿದರು; ವೀರನಾಯಕರು ಪರಿಸ್ಥಿತಿಯ ಪ್ರತ್ಯಕ್ಷ ಪರಿಶೀಲಕರಾಗಿ ನಿಂತರು.

ದ್ವೇಷಾಸೂಯೆಗಳಿಲ್ಲದೆ ಎಲ್ಲರನ್ನೂ ಪ್ರೀತಿಸುವ, ಗೌರವಿಸುವ ಉದಾತ್ತ ಮನೋಧರ್ಮದವರು ಭಾರತೀಯರು; ಅದರಲ್ಲೂ ಗ್ರಾಮೀಣ ಜನರು. ಎಷ್ಟೋ ಸಂದರ್ಭಗಳಲ್ಲಿ ಅಂಥಾ ಮನೋಧರ್ಮ ಪರೀಕ್ಷೆಗೆ, ಹೀಯಾಳಿಕೆಗೆ ಗುರಿಯಾಗುವ ಸಂಭವವೇ ಅಧಿಕ. ಆದರೆ ಇಂಥಾ ಕಾರ್ಯನೀತಿಯನ್ನು ವ್ರತದಂತೆ ಪಾಲಿಸಿಕೊಂಡು ಬಂದವರು ಸಾಕಷ್ಟು ಜನರಿದ್ದಾರೆ. ವೀರನಾಯಕರ ಪಾಲಿಗೂ ಇದು ಅಗ್ನಿಪರೀಕ್ಷೆಯಂತೆ ಎದುರಾದುದು ಸಹಜ. ಅದನ್ನು ಅವರು ಎದುರಿಸಲೆತ್ನಿಸಿದುದು ನಿರಂತರ ಅಧ್ಯಯನಶೀಲತೆಯಿಂದ; ಅಂಥಾ ಜ್ಞಾನದಿಂದ ಪಡೆದ ವಿನಯಪೂರ್ವಕ ನಡವಳಿಕೆಯಿಂದ; ಸಂಸ್ಕಾರ ಬಲದಿಂದ ಸಾಧಿಸಿದ ಪ್ರೀತಿ-ಆದರ ಗುಣ-ಸ್ವಭಾವದಿಂದ; ಎಲ್ಲಕ್ಕೂ ಮುಖ್ಯವಾಗಿ, ಗಾಂಧಿ, ಪೆರಿಯಾರ್, ಅಂಬೇಡ್ಕರ್ ಮೊದಲಾದ ಚಿಂತಕರ ವಿಚಾರಗಳ ಪ್ರೇರಣೆಯಿಂದ. ಆಗ ವೀರ-ನಾಯಕರು ಊರ-ನಾಯಕರಾದರು; ಎಲ್ಲ ಸಮುದಾಯಗಳ ಹೃದಯಗಳನ್ನು ಗೆದ್ದರು; ಸರ್ವರಿಗೂ ಮಾರ್ಗದರ್ಶಿಯಾದರು.

ಸಾಮಾಜಿಕವಾಗಿ ವೀರನಾಯಕರು ಹರ್ತಿಕೋಟೆಯಲ್ಲಿ ಉಂಟುಮಾಡಿದ ಪರಿವರ್ತನೆ ಗಮನಾರ್ಹ. ಸಾಮಾಜಿಕ ಪಿಡುಗುಗಳಲ್ಲಿ ಮುಖ್ಯವಾದುದೆನಿಸಿದ ಅಸ್ಪೃಶ್ಯತೆಯ ನಿವಾರಣೆಯತ್ತ ಅವರ ಗಮನ ಹರಿಯಿತು. ಸಮಾನತೆಯ ತತ್ವವನ್ನು ಅನುಸರಿಸಿ ಇತರರಿಗೆ ಮಾದರಿಯಾದರು; ವಿಚಾರವಂತರ ಗೌರವಕ್ಕೆ ಪಾತ್ರರೆನಿಸಿದರು. ಈ ಸಂದರ್ಭದಲ್ಲಿ, ವೀರನಾಯಕರ ಪುತ್ರ ಹೆಚ್.ವಿ.ವೀರೇಂದ್ರಸಿಂಹ ಅವರು ವ್ಯಕ್ತಪಡಿಸಿರುವ ವಿಚಾರಗಳು ಗಮನಿಸಲರ್ಹವೆನಿಸುತ್ತವೆ. ಅವರು ಹೇಳಿರುವಂತೆ, "ತಮ್ಮ ಬದುಕನ್ನು ದೀರ್ಘಕಾಲದವರೆಗೆ ಸಮಾಜದ ಏಳಿಗೆಗಾಗಿ ಮೀಸಲಿಟ್ಟವರು ನಮ್ಮ ತಂದೆ. ತಮ್ಮ ಜೀವನದುದ್ದಕ್ಕೂ ಹೋರಾಟದ ಹಾದಿಯನ್ನೆ ತುಳಿದವರು. ಅಜ್ಞಾನ-ಅಂಧಕಾರದಲ್ಲಿ ಮುಳುಗಿಹೋಗಿದ್ದ ಗ್ರಾಮದಲ್ಲಿ ಜ್ಞಾನದ ಜ್ಯೋತಿಯನ್ನು ಬೆಳಗಿಸಿದವರು. ನಮ್ಮ ಗ್ರಾಮ ಪರಿಸರದಲ್ಲಿ ಹೆಚ್ಚಾಗಿ ವಾಸಿಸುವವರೆಂದರೆ ಪರಿಶಿಷ್ಟಜಾತಿ-ವರ್ಗ ಹಾಗೂ ಹಿಂದುಳಿದ ಜನಾಂಗದವರು. ನಮ್ಮ ಗ್ರಾಮೀಣ ಜನರಲ್ಲಿ ಮನೆಮಾಡಿಕೊಂಡಿದ್ದ ಮೂಢನಂಬಿಕೆಗಳನ್ನು ದೂರಮಾಡಿ, ಶೋಷಣೆಗೆ ಬಲಿಯಾದ ಪರಿಶಿಷ್ಟ ಜಾತಿ-ವರ್ಗಗಳವರನ್ನು ಬಡಿದೆಬ್ಬಿಸಿ ಸ್ವತಂತ್ರವಾಗಿ ದುಡಿಮೆ ಮಾಡಲು ಪ್ರೋತ್ಸಾಹಿಸಿದವರು ನಮ್ಮ ತಂದೆ. ಹಲವಾರು ಸಂಘ-ಸಂಸ್ಥೆಗಳನ್ನು ಕಟ್ಟಿ ಆ ಮೂಲಕ ಗ್ರಾಮೀಣ ಜನತೆಯನ್ನು ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ರಂಗಗಳಲ್ಲಿ ಸ್ವಾವಲಂಬಿಗಳಾಗಲು ಸಹಕರಿಸಿದರು. ಮಹಾತ್ಮಾ ಗಾಂಧಿ, ಡಾ.ಅಂಬೇಡ್ಕರ್ ಮತ್ತು ಪೆರಿಯಾರ್‌ರಂಥವರ ವಿಚಾರಧಾರೆಗಳಿಂದ ಪ್ರೇರಣೆ ಹೊಂದಿ ಅನೇಕ ಸಾಮಾಜಿಕ ಸುಧಾರಣೆಗಳನ್ನು ಜಾರಿಗೆ ತಂದರು. ಊರಿನ ದಲಿತರಲ್ಲಿ ಸಾಮಾಜಿಕಪ್ರಜ್ಞೆ ಮೂಡಿಸಿ, ಊರಿನ ಮುಖ್ಯಬೀದಿ(ರಾಜಬೀದಿ)ಯಲ್ಲಿ ಓಡಾಡಲು ಇದ್ದ ನಿರ್ಬಂಧವನ್ನು ಧಿಕ್ಕರಿಸಿ ದಲಿತರೂ ರಾಜಬೀದಿಯಲ್ಲಿ ಓಡಾಡುವಂಥ, ಹಬ್ಬ-ಹರಿದಿನಗಳನ್ನು ಆಚರಿಸುವಂಥ, ಗೌರವದಿಂದ ವಿದ್ಯೆ-ಬುದ್ಧಿ ಕಲಿತು ಸ್ವಾಭಿಮಾನದಿಂದ ಬಾಳುವಂಥ ವಾತಾವರಣ ಸೃಷ್ಟಿಸಿದುದು ಇವರ ಹೆಗ್ಗಳಿಕೆ. ತಮ್ಮ ವರ್ಚಸ್ಸಿನಿಂದ ಅನೇಕರನ್ನು ನೌಕರಿಗೆ ಕಳುಹಿಸಿದರು. ಸಾಮಾಜಿಕ ಬದಲಾವಣೆಗಳನ್ನು ಬಹುದಕ್ಷತೆಯಿಂದ, ಜಾಣತನದಿಂದ ನಿಭಾಯಿಸಿ, 'ಆನೆ ನಡೆದದ್ದೆ ದಾರಿ' ಎಂಬಂತೆ ದಿಟ್ಟತನದಿಂದ ಬಾಳಿದರು."[೨]

ವೀರನಾಯಕರ ಒಟ್ಟು ಸಾಧನೆಯನ್ನು ಗಮನಿಸಿ ಹೇಳುವುದಾದರೆ, ಅವರು ಇತಿಹಾಸ ಮತ್ತು ಸಾಹಿತ್ಯ ಕ್ಷೇತ್ರಗಳಿಗೆ ನೀಡಿದ ಕೊಡುಗೆಯು ಎಲ್ಲಕ್ಕಿಂತಲೂ ಮಿಗಿಲಾದುದು. ಬೌದ್ಧಿಕನೆಲೆಯಲ್ಲಿ ಕಾರ್ಯನಿರ್ವಹಿಸಿ ಶೈಕ್ಷಣಿಕ ವಲಯದಲ್ಲಿ ಗುರುತಿಸಿಕೊಳ್ಳುವುದು ಸುಲಭವೇನಲ್ಲ. ವೀರನಾಯಕರ ಸಾಮಾಜಿಕ ಹಿನ್ನೆಲೆಯನ್ನು ಗಮನಿಸಿದರೆ ಇದು ಇನ್ನಷ್ಟು ದೃಢಪಡುತ್ತದೆ. ಸ್ವಾಧ್ಯಾಯ, ಅನುಭವಗಳ ಕಾರಣವಾಗಿ ಗುರುತಿಸಿಕೊಂಡ ನಂತರವೂ ಬಹುಮಂದಿಗೆ ಬರವಣಿಗೆ, ಸಂಶೋಧನೆಗಳಂಥ ಪ್ರವೃತ್ತಿಗಳು ಕೈಗೂಡುವುದು ಕಷ್ಟ. ಈ ದೃಷ್ಟಿಯಿಂದ, ವೀರನಾಯಕರು ವಿರಳ ವ್ಯಕ್ತಿಗಳಲ್ಲಿ ಒಬ್ಬರೆನಿಸುವುದುಂಟು. ಹರ್ತಿಕೋಟೆಯಂಥಾ ಇತಿಹಾಸ ಪ್ರಸಿದ್ಧ ಸ್ಥಳದ ಪ್ರಭಾವವೇ ಇದಕ್ಕೆ ಮುಖ್ಯ ಕಾರಣವೆನ್ನಬಹುದು. ಹರತಿ ನಾಯಕ ಪ್ರಭುಗಳ ಕಾಲದ ಸಂಸ್ಕೃತಿಯ ಸ್ಮರಣೆ ಇಂದಿಗೂ ಈ ಪರಿಸರದಲ್ಲಿ ಜೀವಂತವಾಗಿದೆ. ಹರ್ತಿಕೋಟೆಯಲ್ಲಿ ಜನ್ಮತಳೆದ ಸಾಹಿತಿಗಳು, ಇತಿಹಾಸಕಾರರು, ಕಲಾವಿದರು, ಹೋರಾಟಗಾರರು ಇನ್ನಿತರ ಬುದ್ಧಿಜೀವಿಗಳನ್ನು ಗಮನಿಸಿದಾಗ

ಇದು ನಿಜವಿರಬಹುದೆನಿಸುತ್ತದೆ. ವೀರನಾಯಕರು ಇಂಥಾ ಸನ್ನಿವೇಶದ ಮರುಸೃಷ್ಟಿಯೆನ್ನುವುದರಲ್ಲಿ ಅನುಮಾನವಿಲ್ಲ.

ಇತಿಹಾಸ ಸಂಶೋಧನೆ ಮತ್ತು ಸೃಜನ ಬರವಣಿಗೆಗಳ ಕಾರಣವಾಗಿ ವೀರನಾಯಕರು ಚಿತ್ರದುರ್ಗ ಜಿಲ್ಲೆಯಲ್ಲಿ ಹೆಸರು ಮಾಡಿರುವುದು ವಾಸ್ತವ. ತಮ್ಮ ಮೂಲಗುಣಕ್ಕನುಸಾರ ವೀರನಾಯಕರು ಚರಿತ್ರೆಗೇ ಹೆಚ್ಚಿನ ಆದ್ಯತೆ ನೀಡಿರುವುದು ಸ್ಪಷ್ಟ. ಇದನ್ನು ಪ್ರೊ.ಲಕ್ಷ್ಮಣ್ ತೆಲಗಾವಿಯವರು ಅಭಿವ್ಯಕ್ತಿಸಿರುವುದು ಹೀಗೆ : "ಇತಿಹಾಸ ಶೋಧನೆಯಲ್ಲಿ ಆಸಕ್ತರಾಗಿದ್ದ ವೀರನಾಯಕರು ಸೃಜನಶೀಲ ಸಾಹಿತ್ಯಕ್ಷೇತ್ರದತ್ತ ತಮ್ಮ ಗಮನ ಹರಿಸಿದುದು ಕುತೂಹಲಕಾರಿಯದುದು. ಅದರ ಫಲವಾಗಿ ಅವರು ಮೂರು ಕಾದಂಬರಿಗಳನ್ನೂ ಮೂರು ನಾಟಕಗಳನ್ನೂ ಬರೆದಿರುವರು. ಈ ಎಲ್ಲ ಕೃತಿಗಳ ವಸ್ತುವಾಗಿ ಚರಿತ್ರೆಯು ವಿಜೃಂಭಿಸಿದೆಯೆನ್ನುವುದು ಗಮನಿಸಬೇಕಾದ ಸಂಗತಿ. ಕಾದಂಬರಿಕಾರರು ಹಾಗೂ ನಾಟಕಕಾರರಾಗಿ ಅವರು ಎಷ್ಟರಮಟ್ಟಿಗೆ ಯಶಸ್ವಿಯಾಗಿದ್ದಾರೆ ಇತ್ಯಾದಿ ಚರ್ಚೆ ಇಲ್ಲಿ ಅಪ್ರಸ್ತುತವಾದರೂ ಮೂಲವಸ್ತುವಿನ ಬಳಕೆಯಲ್ಲಿ ಅವರು ತೋರಿರುವ ಜಾಣ್ಮೆ, ತಾಳ್ಮೆ, ನಿರೂಪಣಾ ಸಾಮರ್ಥ್ಯಗಳು ಗಮನ ಸೆಳೆಯಬಹುದಾದ ಅಂಶಗಳು. ಕಲ್ಪನೆ ಮತ್ತು ವಾಸ್ತವತೆಗಳು ಸಮನಾಗಿ ಮೇಳೈಸಿವೆ ಅವರ ಕೃತಿಗಳಲ್ಲಿ. ಕತೆ ಹೇಳುವ, ವಿವರವಾಗಿ ವರ್ಣಿಸುವ, ಉತ್ಸಾಹದಿಂದ ಮುನ್ನುಗ್ಗುವ ಅವರಿಗೆ ಚರಿತ್ರೆಯು ಸಂದರ್ಭದ ವಾಸ್ತವತೆಯ ಪ್ರಜ್ಞೆಯು ಅಂಕುಶದಂತೆ ಕೆಲಸ ಮಾಡಿದೆ. ಇತಿಹಾಸ ಪರಿಧಿಯನ್ನು ಮೀರಲಾಗದ ಸಂದಿಗ್ಧತೆಗೆ ಒಳಗಾದಾಗಲೆಲ್ಲ ಅವರು ಚರಿತ್ರೆಯನ್ನೇ ಬರೆದಿದ್ದಾರೆ-ಕಾದಂಬರಿಗಳಲ್ಲೂ! ಅವರು ಕೊಟ್ಟಿರುವ ಅಡಿಟಿಪ್ಪಣಿ, ಇನ್ನಿತರ ಪೂರಕ ಪುರಾವೆಗಳು ಕೂಡ ಓದುಗರಲ್ಲಿ ಅಂಥಾ ಭಾವನೆಯನ್ನು ಮೂಡಿಸುವಲ್ಲಿ ನೆರವಾಗುತ್ತವೆ. ಚಿತ್ರದುರ್ಗ ಮುಂತಾದ ನಾಯಕ ಮನೆತನಗಳ ಚರಿತ್ರೆಯ ಅಧ್ಯಯನದಲ್ಲಿ ಅವರ ಕಾದಂಬರಿಗಳೂ ಆಕರವೆನಿಸುವ ಅರ್ಹತೆಗೆ, ಗೌರವಕ್ಕೆ ಪಾತ್ರವಾಗಿವೆಯೆನ್ನುವುದನ್ನು ಹೆಮ್ಮೆಯಿಂದ ಹೇಳಬಹುದು."[೩]

ಹರ್ತಿಕೋಟೆ ಮತ್ತು ಹಿರಿಯೂರು ತಾಲ್ಲೂಕಿನ ಎಷ್ಟೋ ಗ್ರಾಮಗಳಲ್ಲಿ ವೀರನಾಯಕರು ಇಂದಿಗೂ ಸ್ಮರಣಾರ್ಹರು. ಅವರು ಪ್ರಸ್ತುತರೆನಿಸಲು ಇರುವ ಪ್ರಮುಖ ಕಾರಣಗಳಲ್ಲಿ ಬಡವರಿಗೆ ಪ್ರಾಮಾಣಿಕವಾಗಿ ಸ್ಪಂದಿಸುತ್ತಿದ್ದುದೂ ಒಂದು. ಜಾತಿ-ವರ್ಗಗಳ ಭೇದವಿಲ್ಲದೆ ಎಲ್ಲರನ್ನೂ ಸಮಾನವಾಗಿ ಕಾಣುತ್ತಿದ್ದ, ಪ್ರೀತಿಸುತ್ತಿದ್ದ ಕಾರಣಕ್ಕೆ ಜನರು ಇಂದಿಗೂ ಅವರ ನೆನಪನ್ನು ಉಳಿಸಿಕೊಂಡು ಬಂದಿದ್ದಾರೆ. ಹೆಚ್. ವಿ.ವೀರೇಂದ್ರಸಿಂಹ ಅವರು ಹೇಳುವಂತೆ, "ಹಸಿವು, ಬಡತನ, ದಾರಿದ್ರ್ಯ, ವೈಷಮ್ಯಗಳಿಂದ ಗ್ರಾಮೀಣ ಜನರಲ್ಲಿ ಹೊತ್ತಿ ಉರಿಯುತ್ತಿದ್ದ ದ್ವೇಷಾಸೂಯೆಗಳನ್ನು ಶಮನ ಮಾಡುವುದು, ಊರು-ಕೇರಿ ಹಾಗೂ ಸುತ್ತಮುತ್ತಲ ಗ್ರಾಮಗಳ ಜನಗಳ ನೂರಾರು ದುಃಖ-ದುಮ್ಮಾನಗಳಿಗೆ ಸ್ಪಂದಿಸುವುದು, ಜಗಳಗಳನ್ನು ಬಗೆಹರಿಸಿ ರಾಜಿ ಮಾಡಿಸುವುದು, ಸಂಬಂಧಿಸಿದವರನ್ನು ಕರೆದು ಕೂರಿಸಿ ಬುದ್ಧಿ ಹೇಳುವುದು, ಒಂದಾಗುವಂತೆ ಮಾಡುವುದು, ವ್ಯಾಜ್ಯಗಳು ಪೊಲೀಸ್‌ಠಾಣೆಯನ್ನಾಗಲಿ, ನ್ಯಾಯಾಲಯದ ಕಟ್ಟೆಯನ್ನಾಗಲಿ ಏರದಂತೆ ತಡೆದು ತಿಳಿವಳಿಕೆ ಹೇಳುವುದು ಅವರ ನಿತ್ಯದ ದಿನಚರಿಯಾಗಿತ್ತು. ಊರಲ್ಲಿ ಯಾವುದೇ ಜನೋಪಯೋಗಿ ಕೆಲಸಗಳು

ನಡೆಯಬೇಕಾದರೂ ಹಾಜರಿದ್ದೆ ಇರುತ್ತಿದ್ದವರೆಂದರೆ ನಮ್ಮ ತಂದೆ. ಎಂಥ ಕ್ಲಿಷ್ಟ ಸಮಸ್ಯೆಗಳು ಎದುರಾದರೂ ಧೈರ್ಯದಿಂದ, ಎದೆಗಾರಿಕೆಯಿಂದ ನಿಂತು ಛಲದಿಂದ ಸಾಧಿಸುವ ಪ್ರವೃತ್ತಿ ಅವರದಾಗಿತ್ತು. ನನ್ನೂರಿನ ಹಾಗೂ ಸುತ್ತಮುತ್ತಲ ಹತ್ತಾರು ಗ್ರಾಮಗಳ ಜನರಿಗೆ ಅವರೊಬ್ಬ ವ್ಯಕ್ತಿಯಾಗಿರದೆ ಶಕ್ತಿಯಾಗಿದ್ದರೆಂಬುದು ವಾಸ್ತವ.”[೪]

ವೀರನಾಯಕರನ್ನು ಕುರಿತ ಪ್ರಸ್ತುತ ಅಧ್ಯಯನವು ಈ ಬಗೆಯ ವ್ಯಕ್ತಿಗಳನ್ನು ಸಮಾಜಕ್ಕೆ ಅಧಿಕೃತವಾಗಿ ಹಾಗೂ ವಿವರವಾಗಿ ಪರಿಚಯಿಸುವ ನಿಟ್ಟಿನಲ್ಲಿ ಉಪಯುಕ್ತವೆನಿಸಬಹುದು. ಅಲ್ಲದೆ, ಇಂಥವರ ಸಾಧನೆಗಳು, ಬರಹಗಳು ಇತ್ಯಾದಿ ಅವರ ನಿರ್ಗಮನದೊಂದಿಗೇ ಮರೆಯಾಗಬಾರದೆಂಬುದೂ ಇಲ್ಲಿ ಮುಖ್ಯ. ಹರ್ತಿಕೋಟೆಯನ್ನು ಸಾಂಸ್ಕೃತಿಕಕೇಂದ್ರವಾಗಿಸಬೇಕೆನ್ನುವ, ‘ವಾಲ್ಮೀಕಿ ಸಾಹಿತ್ಯ ಸಂಪದ’ ಪ್ರಕಾಶನ ಸಂಸ್ಥೆಯನ್ನು ಕಟ್ಟಿ ಬೆಳೆಸಬೇಕೆನ್ನುವ, ಒಂದಲ್ಲ ಒಂದು ಬೌದ್ಧಿಕ ಚಟುವಟಿಕೆಗಳು ಇಲ್ಲಿ ಸದಾ ನಡೆಯುತ್ತಿರಬೇಕೆನ್ನುವ ಮಹೋದ್ದೇಶ ವೀರನಾಯಕರದಾಗಿದ್ದಿತು. ಅವರು ಕುಟುಂಬವರ್ಗದವರ ಉದಾರತೆ, ಆಸಕ್ತಿಗಳ ಕಾರಣವಾಗಿ ಈ ಎಲ್ಲ ಉದ್ದೇಶಗಳೂ ಈಡೇರುವ ಕಾಲ ಈಗ ಸನ್ನಿಹಿತವಾಗಿದೆ.

ಹೆಚ್.ವಿ.ವೀರನಾಯಕ ‘ಹರತಿ’ಯಂಥವರ ಶ್ರಮ ವಿಫಲವಾಗಲಾರದು, ಕನಸು ಕರಗಲಾರದು ಎಂಬ ನಿರೀಕ್ಷೆ ಅವರ ಬದುಕು-ಬರಹಗಳ ಬಗ್ಗೆ ಪ್ರೀತಿ-ಗೌರವ ಇರಿಸಿಕೊಂಡಿರುವ ಎಲ್ಲರಲ್ಲೂ ಸದಾ ಇರುತ್ತದೆ.

❑❑

**ಟಿಪ್ಪಣಿಗಳು**

೧. ಇತಿಹಾಸಕಾರ ಹೆಚ್.ವಿ.ವೀರನಾಯಕ ‘ಹರತಿ’, ಪು.xii

೨. ಅದೇ, ಪು.viii

೩. ಹರತಿಸಿರಿ, ಪು.xv-xvii

೪. ಇತಿಹಾಸಕಾರ ಹೆಚ್.ವಿ.ವೀರನಾಯಕ ‘ಹರತಿ’, ಪು.vii-ix.

# ಅನುಬಂಧಗಳು

ಅನುಬಂಧ ೧ : ಚಿತ್ರದುರ್ಗ ಜಿಲ್ಲೆಯ ನಕ್ಷೆ

ಅನುಬಂಧ ೨ : ಹರತಿ ಮನೆತನ ಮತ್ತು ರತ್ನಗಿರಿ-ಮಿಡಗೇಸಿ ಪಾಳೆಯಗಾರರ ವಂಶವೃಕ್ಷಗಳು

ಅನುಬಂಧ ೩ : ರೇಖಾಚಿತ್ರಗಳು ಹಾಗೂ ಛಾಯಾಚಿತ್ರಗಳು

ಅ. ರೇಖಾಚಿತ್ರಗಳು : ಹ.ವೀ.ಪ್ರತಾಪಸಿಂಹ
ಬಿ.ಡಿ.ಜಗದೀಶ್

ಆ. ಛಾಯಾಚಿತ್ರಗಳು : ಪ್ರೊ.ಲಕ್ಷ್ಮಣ್ ತೆಲಗಾವಿ
ಮತ್ತು ಇತರರು

# ಅನುಬಂಧ ೧

## ಚಿತ್ರದುರ್ಗ ಜಿಲ್ಲೆಯ ನಕ್ಷೆ



# ಅನುಬಂಧ ೨

## ಹರತಿ ಮನೆತನದ ವಂಶವೃಕ್ಷ



# ರತ್ನಗಿರಿ - ಮಿಡಗೇಸಿ ಪಾಳೆಯಗಾರರ ವಂಶವೃಕ್ಷ



# ಅನುಬಂಧ ೩

## ರೇಖಾಚಿತ್ರಗಳು ಹಾಗೂ ಛಾಯಾಚಿತ್ರಗಳು

### ಅ. ರೇಖಾಚಿತ್ರಗಳು

#### ಹರ್ತಿಕೋಟೆಯ ಸ್ಮಾರಕಗಳು



ವೆಂಕಟರಮಣಸ್ವಾಮಿ ದೇವಾಲಯ



ಪೂಜಾರಿ ಬಿ(ಚಿ)ಕ್ಕಯನ ಮಗ ಬೀರೇದನ
ಹೆಸರಿನಲ್ಲಿರುವ ವೀರ-ಮಾಸ್ತಿಕಲ್ಲು



ರಾಜದಂಪತಿಗಳ ಶಿಲ್ಪ



ಬಾಣ ಪ್ರಯೋಗಿಸುತ್ತಿರುವ ವೀರ



ಕಾಳಗವಾಡುತ್ತಿರುವ ಆನೆಗಳು



ಹುಲಿಯ ಶಿಲ್ಪ



ಈರ್ವರು ವೀರರು



ಎರಡು ನಂದಿಗಳಿರುವ ಶಿಲ್ಪ



ಶಿಲ್ಪಾಲಂಕೃತ ದೀಪಸ್ತಂಭ



ವಿಜಯನಗರ ಶೈಲಿಯ
ರಾಜಪೋಷಾಕು ತೊಟ್ಟಿರುವ ಪುರುಷ



ವೀರಪದ್ದ(ದ್ರ)ಣ್ಣನಾಯಕನ ಸಮಾಧಿ ಮೇಲಿರುವ
ಸ್ತಂಭಶಿಲ್ಪ



ಉಯ್ಯಾಲೆ ಮಂಟಪ ಮತ್ತು ಕಲಾತ್ಮಕ ದೀಪಸ್ತಂಭಗಳ ಹಿನ್ನೆಲೆಯಲ್ಲಿ ಆಂಜನೇಯಸ್ವಾಮಿ ಮತ್ತು ವೆಂಕಟರಮಣಸ್ವಾಮಿ ದೇವಾಲಯಗಳು (ದೂರನೋಟ)



ಆಂಜನೇಯಸ್ವಾಮಿ ಮತ್ತು ವೆಂಕಟರಮಣಸ್ವಾಮಿ ದೇವಾಲಯಗಳು (ಸಮೀಪ ನೋಟ)



ಉಯ್ಯಾಲೆ ಮಂಟಪ ಮತ್ತು
ಕಲಾತ್ಮಕ ದೀಪಸ್ತಂಭ



ಕಲಾತ್ಮಕ ದೀಪಸ್ತಂಭದ ಸಮೀಪ ನೋಟ



ವೀರಭದ್ರಸ್ವಾಮಿ ದೇವಾಲಯ



ಅಹೋಬಲನರಸಿಂಹಸ್ವಾಮಿ ಗುಡಿ



ರೇವಣಸಿದ್ಧೇಶ್ವರ ದೇವಾಲಯ



ಓರುಗಲ್ಲಮ್ಮನ ದೇವಸ್ಥಾನ



ಕೆಂಚಲಿಂಗೇಶ್ವರ ದೇವಾಲಯ



ವೀರಮಾಳೇಶ್ವರ ದೇವಾಲಯ



ಕೊಲ್ಲಾಪುರದಮ್ಮನ ಗುಡಿ



ಗುಡಿಯ ಮುಂದಿರುವ 'ಊರಮುಂದಿನ ಬಾವಿ' ಅಥವಾ
'ಸಿಹಿನೀರಿನ ಮಜ್ಜನಬಾವಿ'



ಅಕ್ಕಮಾರಮ್ಮದೇವಿಯ ಗುಡಿ
(ಛಾಯಾಚಿತ್ರ : ಎಚ್.ಎಸ್.ಶ್ರೀನಿವಾಸ)



ಛಲವಾದಿ ಜನಾಂಗದ ಯಜಮಾನ ದ್ಯಾವರಪ್ಪನ ಸಮಾಧಿ
(ಛಾಯಾಚಿತ್ರ : ಎಚ್.ಎಸ್.ಶ್ರೀನಿವಾಸ)



'ಧರ್ಮಪ್ರಭು' ವೀರಪದ್ಮ(ದ್ದ)ಣ್ಣನಾಯಕನ ಸಮಾಧಿ



ಪೂಜಾರಿ ಬಿ(ಚಿ)ಕ್ಕಯನ ಮಗ ಬೀರೇದನ
ಹೆಸರಿನಲ್ಲಿರುವ ವೀರ-ಮಾಸ್ತಿಕಲ್ಲು



ವೀರಗಲ್ಲು ಹಾಗೂ ವೀರ-ಮಾಸ್ತಿಕಲ್ಲುಗಳ ಸಮೂಹ



ಊರುಮಧ್ಯದಲ್ಲಿರುವ ವಿಶಿಷ್ಟ ಕಲ್ಲುಬಾವಿ



ಬರವಣಿಗೆಯಲ್ಲಿ ತಲ್ಲೀನರಾಗಿರುವ ಹೆಚ್.ವಿ.ವೀರನಾಯಕ 'ಹರತಿ'
(ಕಲೆ : ಹ.ವೀ.ಪ್ರತಾಪಸಿಂಹ)



ಹೆಚ್.ವಿ.ವೀರನಾಯಕ 'ಹರತಿ' ಅವರ ಸ್ವಗೃಹ, ಹರ್ತಿಕೋಟೆ



ಹರ್ತಿಕೋಟೆಗ್ರಾಮದ ಮುಖ್ಯಬೀದಿ (ರಾಜಬೀದಿ)



'ಇತಿಹಾಸ ಸಂಶೋಧನ ಪ್ರಸಕ್ತ' ಹುಲ್ಲೂರು ಶ್ರೀನಿವಾಸ ಜೋಯಿಸರು
ವೀರನಾಯಕರಿಗೆ ನೀಡಿದ ಸರ್ಟಿಫಿಕೇಟ್!



೧೯೭೧ರಲ್ಲಿ ಬೆಂಗಳೂರಿನಲ್ಲಿ ನಡೆದ ಮೈಸೂರು ನಾಯಕ ಜನಾಂಗದ ಪ್ರಥಮ ಸಮ್ಮೇಳನದ ಅಂಗವಾಗಿ ಪ್ರದರ್ಶಿಸಲ್ಪಟ್ಟ 'ರಾಜಾ ವೀರಮದಕರಿನಾಯಕ' ನಾಟಕ ಸಮಾರಂಭದ ಅಧ್ಯಕ್ಷರಾಗಿ ಹೆಚ್.ವಿ. ವೀರನಾಯಕ 'ಹರತಿ'. ಚಿತ್ರದಲ್ಲಿರುವವರು : ಟಿ.ಎನ್. ಗಂಜುಗಲಿ, ಸತ್ಯನಾರಾಯಣ, ಹೊ.ಚಿ. ಬೋರಯ್ಯ (ಮಾತನಾಡುತ್ತಿರುವವರು) ಮತ್ತು ಸಿ.ಟಿ.ಎಸ್. ನಾಯಕ್ (ನಿಂತಿರುವವರು)



ಕರ್ನಾಟಕ ಸರ್ಕಾರದ ಸಚಿವ ಕೆ.ಹೆಚ್. ರಂಗನಾಥ್, ಚಿತ್ರದುರ್ಗ ಕ್ಷೇತ್ರದ ಶಾಸಕ ಸಿ.ಆರ್. ಮಹಮ್ಮದ್ ಸೈಫುದ್ದೀನ್, ಎ. ಮಸಿಯಪ್ಪ ಅವರೊಡನೆ ವೀರನಾಯಕರು




೧೯೮೧ ಅಕ್ಟೋಬರ್ ೨ರಂದು ಚಿತ್ರದುರ್ಗದಲ್ಲಿ ನಡೆದ 'ದುರ್ಗದ ಧವಳಕೀರ್ತಿ' ಐತಿಹಾಸಿಕ ಕಾದಂಬರಿ ಬಿಡುಗಡೆ ಸಮಾರಂಭದಲ್ಲಿ ಮಾತನಾಡುತ್ತಿರುವ ವೀರನಾಯಕರು.
ವೇದಿಕೆಯಲ್ಲಿ : ಬರಗೂರು ರಾಮಚಂದ್ರಪ್ಪ ಶಾಂತಕುಮಾರ್(ಜಿಲ್ಲಾಧಿಕಾರಿ), ಡಾ.ಡಿ. ರಾಮಚಂದ್ರನಾಯಕ್



೧೯೮೩ ಅಕ್ಟೋಬರ್ ೪ರಂದು ಹರ್ತಿಕೋಟೆಯಲ್ಲಿ ಏರ್ಪಟ್ಟ ಪುಸ್ತಕ ಬಿಡುಗಡೆ ಕಾರ್ಯಕ್ರಮದಲ್ಲಿ ವೀರನಾಯಕರ 'ಗುಮ್ಮಳ್ಳಿ ಕದನ' ಕೃತಿಯನ್ನು ಎಂ.ವಿ. ಚಿತ್ರಲಿಂಗಯ್ಯನವರು ಬಿಡುಗಡೆ ಮಾಡುತ್ತಿರುವುದು.
ಅಧ್ಯಕ್ಷ ಸ್ಥಾನದಲ್ಲಿ : ಹಂಪ ನಾಗರಾಜಯ್ಯ

# ಆಕರಸಾಹಿತ್ಯ


**ಗ್ರಂಥಗಳು**

೧. ಹೆಚ್.ವಿ.ವೀರನಾಯಕ 'ಹರತಿ', ೧೯೮೭, **ಕ್ಷಾತ್ರಾಂಶ ಪ್ರಬೋಧ** (೨ನೇ ಮುದ್ರಣ), ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ

೨. ಹೆಚ್.ವಿ.ವೀರನಾಯಕ 'ಹರತಿ', ೧೯೮೭, **ರಾಷ್ಟ್ರಸೇವೆಯಲ್ಲಿ ನಾಯಕ ಜನಾಂಗ** (೨ನೇ ಮುದ್ರಣ), ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ

೩. ಲಕ್ಷ್ಮಣ್ ತೆಲಗಾವಿ (ಸಂ), ೧೯೮೭, ಹರತಿಸಿರಿ (ಹೆಚ್.ವಿ.ವೀರನಾಯಕ 'ಹರತಿ' ನೆನಪಿನ ಸಂಪುಟ), ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ

೪. ಲಕ್ಷ್ಮಣ್ ತೆಲಗಾವಿ, ೨೦೦೪, **ಇತಿಹಾಸಕಾರ ಹೆಚ್.ವಿ.ವೀರನಾಯಕ 'ಹರತಿ'** (ಜೀವನಚಿತ್ರ), ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ

**ಲೇಖನಗಳು**

೧. ಲಕ್ಷ್ಮಣ್ ತೆಲಗಾವಿ "ಹೆಚ್.ವಿ.ವೀರನಾಯಕ 'ಹರತಿ': ಸ್ಮರಣೆ" **ಇತಿಹಾಸ ಚಂದ್ರಿಕೆ,** ಏಪ್ರಿಲ್ ೧೯೮೩; **ವಾಲ್ಮೀಕಿ ಸಂದೇಶ,** ಜೂನ್ ೧೯೮೩

೨. ಎನ್.ಎಚ್.ಕೋಲಕಾರ, 'ಮಹಾನ್‌ವ್ಯಕ್ತಿ ದಿವಂಗತ ಹೆಚ್.ವಿ.ವೀರನಾಯಕರು', **ವಾಲ್ಮೀಕಿ ಸಂದೇಶ,** ಮಾರ್ಚ್ ೧೯೮೪

೩. ಬಿ.ತಿಪ್ಪಣ್ಣ ಮರಿಕುಂಟೆ, 'ಭೀಷ್ಮಾಚಾರ್ಯರಂತಿದ್ದ ವೀರನಾಯಕರು', **ವಾಲ್ಮೀಕಿ ಸಂದೇಶ,** ಮಾರ್ಚ್ ೧೯೮೪

೪. ಹೆಚ್.ದಯಾನಂದ, 'ಶ್ರೀ ವೀರನಾಯಕ : ದಲಿತಪ್ರಜ್ಞೆಯ ಪಾಳೇಗಾರ', **ವಾಲ್ಮೀಕಿ ಸಂದೇಶ,** ಮಾರ್ಚ್ ೧೯೮೪

೫. ಎಂ.ವಿ.ಚಿತ್ರಲಿಂಗಯ್ಯ, 'ನಾಯಕವಂಶ ಭಾಸ್ಕರ", **ವಾಲ್ಮೀಕಿ ಸಂದೇಶ,** ಮಾರ್ಚ್ ೧೯೮೪

೬. ಎಚ್.ಎಸ್.ಗೋಪಾಲರಾಯ, "ಹರತಿಯ 'ಸಿರಿ' ವೀರನಾಯಕರು", **ಸಂಯುಕ್ತ ಕರ್ನಾಟಕ,** ೩ ಆಗಸ್ಟ್ ೧೯೮೭

೭. ಎಂ.ವಿ.ಚಿತ್ರಲಿಂಗಯ್ಯ, 'ಹರತಿ ಪಾಳೆಯಗಾರರ ಮೂಲ ವಂಶಾವಳಿ: ಒಂದು ವ್ಯಾಸಂಗ', ಹರತಿಸಿರಿ, ೧೯೮೭

೮. ಬಿ.ತಿಪ್ಪಣ್ಣ ಮರಿಕುಂಟೆ, 'ಹರ್ತಿಕೋಟೆಯ ಸ್ಮಾರಕಗಳು', **ಹರತಿಸಿರಿ**

೯. ಬೆಳಗೆರೆ ಕೃಷ್ಣಶಾಸ್ತ್ರಿ, 'ಸಹಜ ಗಾಂಭೀರ್ಯದ ವ್ಯಕ್ತಿ', **ಹರತಿಸಿರಿ**

೧೦. ಹೆಚ್.ವಿ.ವೀರಭದ್ರಯ್ಯ, 'ಸಂಘಟನಾ ಚತುರ', **ಹರತಿಸಿರಿ**

೧೧. ಟಿ.ಎನ್.ಗಂಡುಗಲಿ, 'ವೀರನಾಯಕರು : ನನ್ನ ದೃಷ್ಟಿಯಲ್ಲಿ', **ಹರತಿಸಿರಿ**

೧೨. ಪಿ.ಆರ್.ತಿಪ್ಪೇಸ್ವಾಮಿ, 'ಹರ್ತಿಕೋಟೆಯ ನೆನಪುಗಳು ಹಾಗೂ ವೀರನಾಯಕರು', **ಹರತಿಸಿರಿ**

೧೩. ಡಿ.ರಾಮಚಂದ್ರನಾಯಕ್, 'ವೀರನಾಯಕರು : ಒಂದು ನೆನಪು', **ಹರತಿಸಿರಿ**

೧೪. ಹೆಚ್.ವಿ.ವೀರೇಂದ್ರಸಿಂಹ, 'ನನ್ನ ತಂದೆ', **ಹರತಿಸಿರಿ**

೧೫. ಟಿ.ಆರ್.ರಾಧಾಕೃಷ್ಣ, 'ವೀರನಾಯಕರ ಮೂರು ಕೃತಿಗಳು', **ಹರತಿಸಿರಿ**

೧೬. ಬರಗೂರು ರಾಮಚಂದ್ರಪ್ಪ, 'ವೀರನಾಯಕರು ಮತ್ತು ನಾನು', **ಹರತಿಸಿರಿ**

೧೭. ಲಕ್ಷ್ಮಣ್ ತೆಲಗಾವಿ, 'ಇತಿಹಾಸಕಾರ ವೀರನಾಯಕರು', **ಹರತಿಸಿರಿ**

## ಮಾಹಿತಿ ಒದಗಿಸಿದವರು

| | |
|---|---|
| ೧. ಡಾ.ಜಿ.ರಂಗಯ್ಯ | ನ್ಯೂಯಾರ್ಕ್ |
| ೨. ಶ್ರೀ ಹೆಚ್.ವಿ.ವೀರೇಂದ್ರಸಿಂಹ | ಹರ್ತಿಕೋಟೆ |
| ೩. ಶ್ರೀ ಕೆ.ಆರ್.ಜಯಣ್ಣ | ಹರ್ತಿಕೋಟೆ |
| ೪. ಶ್ರೀ ಹೆಚ್.ಓ.ನರಸಿಂಹಮೂರ್ತಿ | ಹರ್ತಿಕೋಟೆ |
| ೫. ಶ್ರೀ ಹೆಚ್.ವಿ.ಓಬಳನಾಯಕ | ಹರ್ತಿಕೋಟೆ |
| ೬. ಶ್ರೀ ಪಿ.ಆರ್.ವೀರಭದ್ರನಾಯಕ | ಚಳ್ಳಕೆರೆ |
| ೭. ಶ್ರೀ ಹೆಚ್.ಜೆ.ಕಾಂತರಾಜ್ | ವದ್ದೀಕೆರೆ |
| ೮. ಡಾ.ಡಿ.ರಾಮಚಂದ್ರನಾಯಕ್ | ಚಿತ್ರದುರ್ಗ |

□□

